# ಶ್ರೀ ವ್ಯಾಸತತ್ವಜ್ಞ ತೀರ್ಥರ ಸಂಕ್ಷಿಪ್ತ ಚರಿತ್ರೆ

೨೯।



ಶ್ರೀ ವೇಣೀಸೋಮಪುರ ಕ್ಷೇತ್ರದ
ಜೀರ್ಣೋದ್ಧಾರಕ್ಕಾಗಿ

ಪ್ರತಿಯ ಬೆಲೆ : 10-00

ಓಂ

ಶ್ರೀಮನ್ಮೂಲರಾಮೋ ವಿಜಯತೇ ।

ಶ್ರೀಮದ್ರಾಘವೇಂದ್ರಗುರುಸಾರ್ವಭೌಮೋ ವಿಜಯತೇ ॥

ಶ್ರೀವ್ಯಾಸತತ್ವಜ್ಞತೀರ್ಥೋ ವಿಜಯತೇ ।।।

ದೇವಾಂಶ ಸಂಭೂತರೂ, ಯಜ್ಞದ ಅಗ್ನಿಕುಂಡದಿಂದ ಬಂದ
ಶ್ರೀ ದ್ರೌಪದೀದೇವಿಯವರ ಅಣ್ಣಂದಿರೂ, ಶ್ರೀ ಧೃಷ್ಟದ್ಯುಮ್ನಾಂಶ
ಸಂಭೂತರಾದವರೂ, ಅಪರೋಕ್ಷಜ್ಞಾನಿವರೇಣ್ಯರೂ,
ಶ್ರೀ ಅಡವೀಸ್ವಾಮಿಗಳ ವಿದ್ಯಾಗುರುಗಳೂ ಆದ
ಮಹಾನುಭಾವರಾದ

# ಶ್ರೀ ವ್ಯಾಸತತ್ವಜ್ಞತೀರ್ಥರ ಸಂಕ್ಷಿಪ್ತ ಚರಿತ್ರೆ

ಸಂಗ್ರಾಹಕರು ಮತ್ತು ಲೇಖಕರು :

ಪಂಡಿತರಾಜ, ಸಚ್ಛಾಸ್ತ್ರರತ್ನಾಕರ, ಕೇಂದ್ರ ಮತ್ತು ರಾಜ್ಯ ಪ್ರಶಸ್ತಿ ವಿಜೇತ

**ಮಾಗಡಿ ರಂಗನಾಥಾಚಾರ್ಯರು**

ಆಸ್ಥಾನ ವಿದ್ವಾನ್, ಶ್ರೀ ರಾಘವೇಂದ್ರಸ್ವಾಮಿಗಳವರ ವೇದಾಂತ
ಸಾಮ್ರಾಜ್ಯದ ಮೂಲ ಮಹಾಸಂಸ್ಥಾನ, ಮಂತ್ರಾಲಯ



ಪ್ರಕಾಶಕರು : ಶ್ರೀ ಐಜೀ ಶ್ರೀನಿವಾಸಾಚಾರ್ಯರು ವೇಣೀ ಸೋಮಪುರ
ಪೋಸ್ಟು : ಚಿನ್ನತಾಂಡ್ರಪಾಡು, ಮಂಡಲ : ಅಯಿಜ—509127
ತಾಲ್ಲೂಕ : ಗದ್ವಾಲ, ಜಿಲ್ಲಾ : ಪಾಲಮೂರು ಆಂಧ್ರಪ್ರದೇಶ.

ಚ್ಯವನ ಋಷಿಗಳ ಆಶ್ರಮವೆನಿಸಿದ ವೇಣೀ ಸೋಮಪುರದಲ್ಲಿ
ಬೃಂದಾವನಸ್ಥರಾಗಿರುವ

**ಶ್ರೀ ವ್ಯಾಸತತ್ತ್ವಜ್ಞ ತೀರ್ಥರು (ಐಜಿ ಸ್ವಾಮಿಗಳು)**

ಶ್ರೀ ಧೃಷ್ಟದ್ಯುಮ್ನಾಂಶ ಸಂಭೂತರು.

ಶ್ರೀ ಧೃಷ್ಟದ್ಯುಮ್ನರು :
ಅಗ್ನಿಯ ಅಂಶದಿಂದ ಸಂಭೂತರ, ದ್ರುಪದರಾಜನ ಮಕ್ಕಳು
ಅಯೋನಿಜರು, ಯಜ್ಞದ ಅಗ್ನಿಕುಂಡಲದಿಂದ ಬಂದವರು.
ಶ್ರೀ ದ್ರೌಪದೀದೇವಿಯವರ ಅಣ್ಣಂದಿರು

ಧೃಷ್ಟತ್ವಾದಪ್ರಧೃಷ್ಯತ್ವಾತ್, ದ್ಯುಮ್ನಾದ್ಯುತ್ಸಂಭವಾದಪಿ ।
ಧೃಷ್ಟದ್ಯುಮ್ನ ಕುಮಾರೋಽಯಂ ದ್ರುಪದಸ್ಯಭವತ್ವಿತಿ ॥

ಇವರ ಅಂಶಸಂಭೂತರೇ ಶ್ರೀ ವೆಂಕಟರಾಮಾರ್ಯರು
ಸನ್ಯಾಸಾಶ್ರಮನಾಮ ಶ್ರೀ ವ್ಯಾಸತತ್ವಜ್ಞ ತೀರ್ಥರು
(ಅಮಾನುಷ ಅದ್ಭುತ ಪವಾಡ ಪುರುಷರು)

ಈ ಪುಸ್ತಕವನ್ನು ಮಾಗಡಿ ಕಸಬಾ ಶ್ಯಾನುಭೋಗರಾದ
ಕೀರ್ತಿಶೇಷರಾದ ಶ್ರೀ ಯಂ. ಶೇಷಗಿರಿರಾಯರ ಧರ್ಮಪತ್ನಿಯವರಾದ
ನಾಮಗಿರಿಯಮ್ಮನವರ ಮಕ್ಕಳಾದ
ಪಂಡಿತರಾಜ, ಮಾಗಡಿ ರಂಗನಾಥಾಚಾರ್ಯರ ತಮ್ಮಂದಿರಾದ

**ಶ್ರೀಯುತ ಯಂ. ಯಸ್. ರಾಘವೇಂದ್ರರಾಯರು**

ಧರ್ಮಾರ್ಥವಾಗಿ ಅಚ್ಚು ಹಾಕಿಸಿ, ಶ್ರೀ ಪ್ರಮೋದೂತನಾಮ ಸಂವತ್ಸರದ
ಶ್ರಾವಣ ಬಹುಳ ಶ್ರೀಕೃಷ್ಣಾಷ್ಟಮಿಯ ದಿನ ಶ್ರೀ ವ್ಯಾಸತತ್ವಜ್ಞತೀರ್ಥರ
ಆರಾಧನೆಯ ದಿವಸ ವೇಣೀಸೋಮಪುರದಲ್ಲಿ ಶ್ರೀ ವ್ಯಾಸತತ್ವಜ್ಞತೀರ್ಥರ
ಸೇವಾ ರೂಪವಾಗಿ ಸಮರ್ಪಿಸಿರುತ್ತಾರೆ.

# ಸ್ಥೂಲಪರಿಚಯು

ಪ್ರಕಟೀಕೃತ ಟೀಕೋಕ್ತಿಃ ಮರ್ಕಟೀಕೃತ ಮಾಯಿರಾಟ್ ॥
ಚಾಕೀರ್ತಾತ್ ವ್ಯಾಸತತ್ವಜ್ಞ ಮಸ್ಕರೀಂದ್ರಃ ಕೃಪಾಂಮಯಿ ॥
ವಂದೇಹಂ ವ್ಯಾಸತತ್ವಜ್ಞಂ ನಿಂದಿತಾಖಿಲದುರ್ಮತಂ ।
ನಂದಿತಾಖಿಲಸದ್ವೃಂದಂ ನಂದಸೂನುಪದಾರ್ಚಕಂ ॥

ಆಶ್ರಮನಾಮ—ಶ್ರೀಮದ್ವ್ಯಾಸತತ್ವಜ್ಞತೀರ್ಥರು : ಶ್ರೀ ಭುವನೇಂದ್ರ ತೀರ್ಥರಿಂದ ಸನ್ಯಾಸಾಶ್ರಮ ಶ್ರೀ ಭುವನೇಂದ್ರತೀರ್ಥರು ಶ್ರೀ ರಾಯರಿಂದ ಹತ್ತನೆಯವರು.

ಪೂ. ಅಂಶ—ಯಜ್ಞದ ಅಗ್ನಿಕುಂಡದಿಂದ ಬಂದ ಧೃಷ್ಟದ್ಯುಮ್ನಾಂಶ ಸಂಭೂತರು : ಅಗ್ನಿದೇವಾಂಶರು,

ಪೂರ್ವಾಶ್ರಮದ ನಾಮ : ಶ್ರೀ ವೆಂಕಟರಾಮಾರ್ಯರು—ಪೂರ್ವಾಶ್ರಮ ಮತ್ತು ಸನ್ಯಾಸಾಶ್ರಮದ ಒಟ್ಟು ಜೀವಂತ ಕಾಲ 96 ವರ್ಷಗಳು.

ಪೂರ್ವಾಶ್ರಮದ ಪಿತೃವರ್ಯರು : ಶ್ರೀ ವೆಂಕಟನರಸಿಂಹಾಚಾರ್ಯರು—ಆಪಸ್ತಂಭ ಶಾಖೆ, ಕೌಶಿಕ ಗೋತ್ರ.

ಪೂರ್ವಾಶ್ರಮದ ಪವಾಡಗಳು : ಅಮಾನುಷ ಪವಾಡಗಳು—ಆಶ್ರಮವಾದ ಮೇಲಿನ ಅದ್ಭುತ ಪವಾಡಗಳು.

ಪೂರ್ವಾಶ್ರಮದ ಜ್ಞಾನಕಾರ್ಯ : ಹನ್ನೆರಡಾವರ್ತಿ ಶ್ರೀಮನ್ನ್ಯಾಯ ಸುಧಾ ಮಹಾಮಂಗಳ. ಮೂರು ವರ್ಷಕ್ಕೆ ಒಂದಾವರ್ತಿ ಸುಧಾಮಂಗಳ, ತಿರುಪತಿ ಕ್ಷೇತ್ರದಲ್ಲಿ ಮಂಗಳ ಮಹೋತ್ಸವ.

ಶಿಷ್ಯವರ್ಗ : ಅನೇಕ ಜನ ಶಿಷ್ಯರಿಗೆ ಸುಧಾಪಾಠಪ್ರವಚನ—ಪ್ರವಚನ ಕಾಲದಲ್ಲಿ ಭಕ್ತರಿಗೆ ಮೆಚ್ಚಿದ ಶ್ರೀಕೃಷ್ಣ ಸಾಕ್ಷಾತ್ಕಾರ.

ಗೋಪಾಲದಾಸರ ಕಾಲ ಕ್ರಿ.ಶ. (1721–1762) ಶ್ರೀ ಗಣೇಶಾಂಶ ಸಂಭೂತರಾದ ಶ್ರೀ ಗೋಪಾಲದಾಸರಿಂದ ಭವಿಷ್ಯವಾಣಿ.

ಪೂರ್ವಾಶ್ರಮದಲ್ಲಿಯೇ : ಬೀಚಪಲ್ಲಿಯಲ್ಲಿರುವ ಶ್ರೀ ವ್ಯಾಸರಾಜರಿಂದ ಪ್ರತಿಷ್ಠಿತರಾದ ಶ್ರೀ ಮುಖ್ಯ ಪ್ರಾಣದೇವರ ಸೇವಾಕಾರ್ಯ ಹನ್ನೆರಡು ವರುಷ, ಶ್ರೀ ಮುಖ್ಯ ಪ್ರಾಣದೇವರಿಂದಲೇ "ಶ್ರೀ ವಾಸುದೇವ ವಿಠಲ" ಎಂಬ ಅಂಕಿತ ಪ್ರಾಪ್ತಿ, ಆ ಅಂಕಿತದಿಂದಲೇ ಅನೇಕ ಸುಳಾದಿ ದೇವರ ನಾಮಗಳ ರಚನೆ.

ಆವಾಸಸ್ಥಾನ : ಮೊದಲು ಐಜೀ ಗ್ರಾಮ ಬೀಚಪಲ್ಲಿಯಲ್ಲಿ 12ವರ್ಷಗಳ ಕಾಲ ವಾಸ ಆ ಮೇಲೆ ವೇಣೀ ಸೋಮಪುರ ಚ್ಯವನ ಋಷಿಗಳ ಆಶ್ರಮ, ಚ್ಯವನ ಋಷಿಗಳು ವರುಣನ ಮಕ್ಕಳಾದ ಭೃಗುವಿನ ಮಕ್ಕಳು.

ತತ್ವಜ್ಞಾನಕಾರ್ಯ : ಗೃಹಸ್ಥಾಶ್ರಮದಲ್ಲಿ ಹನ್ನೆರಡಾವರ್ತಿ ಶ್ರೀಮನ್ನ್ಯಾಯ ಸುಧಾ ಮಂಗಳ, ಸನ್ಯಾಸಾಶ್ರಮವಾದ ನಂತರ ಆರು ಆವರ್ತಿ ಶ್ರೀಮನ್ನ್ಯಾಯಸುಧಾ ಮಂಗಳ, ಒಟ್ಟು ಹದಿನೆಂಟಾವರ್ತಿ ಶ್ರೀಮನ್ನ್ಯಾಯ ಸುಧಾ ಮಂಗಳ,

ಪ್ರಮುಖ ಶಿಷ್ಯವರ್ಗ :

1) ಶ್ರೀ ಆರಣ್ಯಕಾಚಾರ್ಯರು (ಮೂದನೂರು ಸ್ವಾಮಿಗಳಾದ ಶ್ರೀ ವಿಷ್ಣುತೀರ್ಥರು)

2) ಮಹಾಭಾಷ್ಯ ಶ್ರೀನಿವಾಸಾಚಾರ್ಯರು (ಇವರು ತಮ್ಮ ಗುರುಗಳಾದ ಶ್ರೀ ವ್ಯಾಸತತ್ವಜ್ಞರ ಮೇಲೆ ಅಷ್ಟಕವನ್ನು ರಚಿಸಿರುತ್ತಾರೆ. ಇವರು ಶ್ರೀ ಉತ್ತರಾಧಿ ಮಠದ ಸತ್ಯಪ್ರಿಯತೀರ್ಥರಕಡೆಯಿಂದ ಬಂದು ಇವರಲ್ಲಿ ವಾಸಮಾಡಿದರು.

3) ಚಿಂಚೋಳಿಯ ಪ್ರಾಚೀನರಾದ ಕೃಷ್ಣಾಚಾರ್ಯರು (ಶ್ರೀವ್ಯಾಸತತ್ವಜ್ಞರಾವಲಂಬನ ಸ್ತೋತ್ರಕಾರರು), ಅನೇಕ ಜನ ಶಿಷ್ಯವರ್ಗ ಇತ್ಯಾದಿ.



ಶ್ರೀ ವ್ಯಾಸತತ್ವಜ್ಞ ಸಮುಪಾಸಿತ ಷೋಡಶಬಾಹು
ಶ್ರೀಮನ್ ಲಕ್ಷ್ಮೀ ನರಸಿಂಹ ದೇವರು, ವೇಣೀಸೋಮಪುರ



ಶ್ರೀ ವ್ಯಾಸತತ್ವಜ್ಞ ತೀರ್ಥ ಸ್ವಪ್ನಲಬ್ಧ
ಶ್ರೀ ರುಕ್ಮಿಣೀಸತ್ಯಭಾಮಾ ಸಹಿತ ಸಂತಾನ ವೇಣುಗೋಪಾಲಕೃಷ್ಣದೇವರು
ಬಲಗಾಲಿನ ಮೇಲೆ ಎಡಗಾಲಿನಿಂದ ಅಲಂಕೃತವಾದ ಭಗವನ್ಮೂರ್ತಿ
ವೇಣೀಸೋಮಪುರ, ಚ್ಯವನ ಋಷ್ಯಾಶ್ರಮ



ವೇಣೀಸೋಮಪುರದಲ್ಲಿರುವ
ಶ್ರೀ ವ್ಯಾಸತತ್ವಜ್ಞ ತೀರ್ಥರ ಅಲಂಕೃತ ಬೃಂದಾವನ

॥ ಶ್ರೀ ಲಕ್ಷ್ಮೀನರಸಿಂಹೋ ವಿಜಯತೇ ॥

# ಶ್ರೀ ವ್ಯಾಸತತ್ತ್ವಜ್ಞತೀರ್ಥರ ಪೂರ್ವಾಶ್ರಮದ ಪರಿಚಯ

18ನೇ ಶತಮಾನದಲ್ಲಿ ರಾಯಚೂರು ಜಿಲ್ಲೆ(ಯ)ಗೆ ಸೇರಿದ ದಿನ್ನಿ ಎಂಬ ಗ್ರಾಮದಲ್ಲಿ ಜನಾರ್ದನಾಚಾರ್ಯರೆಂಬ ಓರ್ವ ಜೋಯಿಸರು ವಾಸ ವಾಗಿದ್ದರು. ಇವರು ಆ ಗ್ರಾಮದ ದೇಸಾಯಿಯ ಮನೆಯಲ್ಲಿ ದೇವರ ಪೂಜೆ ಯನ್ನು ಮಾಡಿಕೊಂಡು ಆತನ ಆಶ್ರಯದಲ್ಲಿದ್ದರು. ಒಂದು ದಿನ ಆ ದೇಸಾಯಿಯು ಇವರ ಬಗ್ಗೆ ತಿರಸ್ಕಾರದ ಮಾತನಾಡಿದನು. ಅದಕ್ಕೆ ಮನಸ್ಸಿ ನಲ್ಲಿ ತುಂಬಾ ದುಃಖಪಟ್ಟು ಜನಾರ್ದನಾಚಾರ್ಯರು ಆ ಗ್ರಾಮದಿಂದಲೇ ಹೊರಟು ಹೋದರು. ಊರಿಂದ ಊರಿಗೆ ಹೋಗುತ್ತಾ ಕಡೆಗೆ ಕಾಶಿಗೆ ಹೋಗಿ ತಲುಪಿದರು. ಕಾಶೀ ಪಟ್ಟಣದಲ್ಲಿ ಸುಮಾರು 30 ವರ್ಷಗಳ ಕಾಲ ವಾಸವಾಗಿದ್ದರು. ನಿತ್ಯ ಗಂಗಾಸ್ನಾನ. ದೇವತಾರಾಧನೆ, ಕಾಶೀ ವಿಶ್ವೇಶ್ವರನ ಸೇವೆ ಮಾಡುತ್ತಿದ್ದರು. ಇಷ್ಟೇ ಅಲ್ಲದೆ ಅಲ್ಲಿ ಘನ ವಿದ್ವಾಂಸರಲ್ಲಿ ಸುಮಾರು 15 ವರ್ಷಗಳ ಕಾಲ ಶಾಸ್ತ್ರಾಭ್ಯಾಸವನ್ನು ಶ್ರದ್ಧೆಯಿಂದ ಮಾಡಿದರು. ದೈವಾನುಗ್ರಹದಿಂದ ಘನಪಂಡಿತರಾಗಿ ಅನೇಕ ಶಿಷ್ಯ ಪರಿವಾರ ಉಳ್ಳವ ರಾದರು. ಈ ರೀತಿ ಪಂಡಿತಾಗ್ರ, ಗಣ್ಯರಾದ ಜನಾರ್ದನಾಚಾರ್ಯರು ಅನೇಕ ಶಿಷ್ಯರೊಡನೆ ಕಾಶೀಯಿಂದ ಹಿಂದಿರುಗಿ ತಾವು ಹಿಂದೆ ವಾಸವಾಗಿದ್ದ ದಿನ್ನಿ ಗ್ರಾಮಕ್ಕೆ ಬಂದರು.

ಆ ಗ್ರಾಮದಲ್ಲಿ ಮುಖಂಡನಾದ ದೇಸಾಯಿಯು ಕಾಶೀಯಿಂದ ಬಂದ ಶಿಷ್ಯವೃಂದದಿಂದ ಕೂಡಿದ ಆಚಾರ್ಯರಿಗೆ ಸ್ವಾಗತವನ್ನು ಕೊಟ್ಟು ಆದರ ದಿಂದ ಅವರಿಗೆ ಆತಿಥ್ಯ ಮಾಡಿದನು. ಆಚಾರ್ಯರಲ್ಲಿ ಕುಶಲ ಸಂಭಾಷಣೆ

ಮಾಡುತ್ತಿರುವಾಗ ಆಚಾರ್ಯರ ಪರಿಚಯವನ್ನು ದೇಸಾಯಿಯವರು ಕೇಳುತ್ತಿರುವಾಗ, ಜನಾರ್ಧನ ಆಚಾರ್ಯರು ತಮ್ಮ ಹಿಂದಿನ ಚರಿತ್ರೆಯನ್ನು ದೇಸಾಯಿಗೆ ತಿಳಿಸಿದರು. ಅದನ್ನು ಕೇಳಿದ ದೇಸಾಯಿಯೂ ತನ್ನ ಹಿಂದಿನ ವರ್ತನೆಗೆ ತುಂಬಾ ಪಶ್ಚತ್ತಾಪಪಟ್ಟು ಆಚಾರ್ಯರಲ್ಲಿ ಕ್ಷಮಾಪಣೆಬೇಡಿದನು.

ಜನಾರ್ದನಾಚಾರ್ಯರು, ಎಲೈ, ದೇಸಾಯಿಯೇ ನೀನು ಆ ದಿನ ನನ್ನನ್ನು ಹಿಯಾಳಿಸಿದರಿಂದಲೇ ನಾನು ಕಾಶೀಗೆ ಹೋಗಿ ಅಲ್ಲಿ ಶಾಸ್ತ್ರಾಭ್ಯಾಸ ಮಾಡಬೇಕಾಯತು. ನಿನ್ನಿಂದ ನನಗೊಂದು ಉಪಕಾರವೇ ಆಯಿತೆಂದು ಹೇಳಿ ಆತನಿಗೆ ಸಮಾಧಾನ ಹೇಳಿದರು.

ಆಗಿನ ಕಾಲದಲ್ಲಿ ಗದ್ವಾಲ ಎಂಬುದು ಪ್ರಸಿದ್ಧ ರಾಜಾಸ್ಥಾನವಾಗಿತ್ತು ಅಲ್ಲಿನ ಹಿಂದೂ ರಾಜನು ವಿದ್ಯಾಪಕ್ಷಪಾತಿ ಆಗಿದ್ದನು. ಪ್ರತಿ ವರ್ಷ ಕಾರ್ತೀಕ ಶುಕ್ಲ ಪೂರ್ಣಮಾ ದಿನ ಗೌರೀ ಹುಣ್ಣಿಮೆಯ ದಿನ ತ್ರಯದಲ್ಲಿ ವಿದ್ವತ್ ಸಭೆಯನ್ನು ನಡೆಸುತ್ತಿದ್ದನು. ಭಾರತದಲ್ಲಿ ಬೇರೆ ಬೇರೆ ಊರುಗಳಿಂದ ಅನೇಕ ಮಂದಿ ವಿದ್ವಾಂಸರು ಗದ್ವಾಲ ಮಹಾರಾಜನ ವಿದ್ವತ್ ಸಭಗೆ ಬಂದು ಭಾಗ ವಹಿಸುತ್ತಿದ್ದರು. ಅವರಿಗೆಲ್ಲಾ ಪ್ರತಿ ವರ್ಷವು ಜಾಪ್ತ ವಿದ್ವತ್ ಸಂಭಾವನೆಗಳನ್ನು ಕೊಡುತ್ತಿದ್ದನು. ಪಂಡಿತ ಪೋಷಣೆಯನ್ನು ಬಹು ಆದರರಿಂದ ಮಾಡುತ್ತಿದ್ದನು.

ಪ್ರತಿ ವರ್ಷವು ತನ್ನ ಆಸ್ಥಾನದಲ್ಲಿ ಭಾಗವಹಿಸಿದ ಬ್ರಾಹ್ಮಣ ಪಂಡಿತರಿಗೆ ವಿದ್ವತ್ ಸಂಭಾವನೆ ಕೊಟ್ಟ ಮೇಲೆ ಅವರೆಲ್ಲಾ ಹೊರಗೆ ಹೋಗುವ ಒಂದು ದಾರಿಯಲ್ಲಿ ಉದ್ದವಾದ ಬಿಳಿ ಬಟ್ಟೆಯನ್ನು ಹಾಸಿರುವಂತೆ ಏರ್ಪಾಡಿಸುತ್ತಿದ್ದನು. ಬ್ರಾಹ್ಮಣರೆಲ್ಲಾ ಆ ಬಟ್ಟೆ ಮೇಲೆ ನಡೆದುಹೋದ ನಂತರ ಅವರ ಪಾದ ಧೂಳಿಯನ್ನು ಶೇಖರಿಸಿ ಒಂದು ಡಬ್ಬಿಯಲ್ಲಿ ಹಾಕಿಟ್ಟು ಆ ಧೂಳಿಯನ್ನು ನಿತ್ಯವೂ ತನ್ನ ಹಣೆಗೆ ರಕ್ಷೆಯಂತೆ ಧರಿಸುವ ಪದ್ಧತಿಯನ್ನು ಅನುಸರಿಸುತ್ತಿದ್ದನು. ಆ ವಿಧವಾದ ನಡವಳಿಕೆಯೂ ಆ ರಾಜಮನತನದಲ್ಲಿ ರಾಜ್ಯಗಳು, ಭಾರತರಾಜ್ಯಾಂಗವಾಗಿ ವಿಲೀನವಾಗುವವರೆಗೆ ನಡೆಯುತ್ತಿತ್ತು.

ಪಂಡಿತಾಗ್ರಗಣ್ಯರಾದ ಶ್ರೀ ಜನಾರ್ದನಾಚಾರ್ಯರು ಸಹ ತಮ್ಮ ಶಿಷ್ಯ ಪರಿವಾರದೊಡನೆ ಗದ್ವಾಲ ರಾಜನ ವಿದ್ವತ್ಸಭೆಗೆ ಹೋಗುತ್ತಿದ್ದರು. ಈ ಆಚಾರ್ಯರ ಪಾಂಡಿತ್ಯಕ್ಕೆ ಮೆಚ್ಚಿದ ರಾಜನು ಇವರಿಗೆಲ್ಲಾ ಬಹಳವಾಗಿ ಆದರಿಸಿ ಗೌರವಿಸಿದ. ರಾಜಮನ್ನಣೆಗೆ ಪಾತ್ರರಾದ ಜನಾರ್ದನಾಚಾರ್ಯರಲ್ಲಿ ಐಜ ಗ್ರಾಮಕ್ಕೆ ಸೇರಿದ ಎಲ್ಲಾ ಲೌಕಿಕರು, ವೈದಿಕರು ಬಹಳವಾಗಿ ಪ್ರಾರ್ಥಿಸಿ ತಮ್ಮ ಗ್ರಾಮದಲ್ಲೇ ಇದ್ದು ಪಾಠ ಪ್ರವಚನ ನಡೆಸಬೇಕೆಂದು ಪ್ರಾರ್ಥಿಸಿದರು. ಅವರೆಲ್ಲರ ಪ್ರಾರ್ಥನೆಯಂತೆ ಜನಾರ್ದನಾಚಾರ್ಯರು ಬಹಳ ವರ್ಷಗಳವರೆಗೆ ಐಜಿ ಗ್ರಾಮವಾಸಿಗಳಾದರು. ಆದ್ದರಿಂದಲೇ ಆ ಮನೆತನದವರಿಗೆಲ್ಲ ಐಜಿ ಆಚಾರ್ಯರೆಂದು ಪ್ರಸಿದ್ಧವಾಗಿದೆ.

ಆ ಜನಾರ್ದನಾಚಾರ್ಯರ ಮಕ್ಕಳು, ಶ್ರೀ ವೆಂಕಟನರಸಿಂಹಾಚಾರ್ಯರು ತಂದೆಯಂತೆ ಚತುಶ್ಶಾಸ್ತ್ರ ಪಾರಂಗತರಾಗಿದ್ದರು. ಇವರ ಸುಪುತ್ರರೇ ನಮ್ಮ ಕಥಾನಾಯಕರಾದ ಶ್ರೀ ವೆಂಕರಾಮಾಚಾರ್ಯರು,

## ಶ್ರೀ ವೆಂಕಟರಾಮಾಚಾರ್ಯರು

ಇವರ ಚಿಕ್ಕವಯಸ್ಸಿನಲ್ಲಿ ತುಂಬಾ ಚೇಷ್ಟೆಯನ್ನು ಮಾಡುತ್ತಿದ್ದರಂತೆ ಇವರ ತಾಯಿಯು ಚಿಕ್ಕ ಹುಡುಗನಾದ ತನ್ನೀ ಮಗನ ಭವಿಷ್ಯದ ವಿಚಾರವಾಗಿ ತುಂಬಾ ಯೋಚಿಸುತ್ತಿದ್ದರಂತೆ.

ಅಂದಿನ ದಿನದಲ್ಲಿ ಉತ್ತನೂರಿನಲ್ಲಿದ್ದ ಗಣೇಶಾಂಶ ಸಂಭೂತರಾದ ಶ್ರೀ ಗೋಪಾಲದಾಸರು, (ಶ್ರೀ ಭಾಗಣ್ಣದಾಸರು) ಭವಿಷ್ಯವನ್ನು ಹೇಳುವರೆಂದು ಸುಪ್ರಸಿದ್ಧರಾಗಿದ್ದರು. ಬೇರೆ ಬೇರೆ ಊರುಗಳಿಂದ ಅನೇಕ ಜನರು ತಂಡೋಪ ತಂಡವಾಗಿ ಬಂದು ಶ್ರೀ ಗೋಪಾಲದಾಸರಲ್ಲಿ ತಮ್ಮ ತಮ್ಮ ಭವಿಷ್ಯ ಕೇಳಲು ಉತ್ತನೂರಿಗೆ ಹೋಗುತ್ತಿದ್ದರು. ಇದು ನಮ್ಮ ಕಥಾನಾಯಕರಾದ ಶ್ರೀ ವೆಂಕಟರಾಮಾಚಾರ್ಯರು ತಾಯಿಯ ಕಿವಿಗು ಬಿದ್ದ ಸಂಗತಿಯಾಗಿತ್ತು. ಒಂದು ದಿನ ಆ ತಾಯಿಯವರು ತನ್ನ ಗಂಡಂದಿರಾದ ಶ್ರೀ ವೆಂಕಟನರಸಿಂಹಾಚಾರ್ಯರಲ್ಲಿ ಈ ಕೆಳಗೆ ಕಂಡಂತೆ ವಿಜ್ಞಾಪಿಸಿದರು.

ಅಣ್ಣನವರ ಹತ್ತಿರ ಹೋಗಿ ನೀವು ಸಹ ನಮ್ಮ ಹುಡುಗನ ವಿಷಯದ ಬಗ್ಗೆ ಭವಿಷ್ಯ ಕೇಳಿಕೊಂಡು ಬರಬಾರದೆ, ದಯಮಾಡಿ ಹೋಗಿರಿ ಎಂದರು.

ಅದರ ಮಾತಿನಂತೆ ವೆಂಕಟನರಸಿಂಹಾಚಾರ್ಯ ಉಪನೀತರಾದ ಚಿಕ್ಕ ವಯಸ್ಸಿನಲ್ಲಿ ತಮ್ಮ ಬಾಲಕನನ್ನು ಕರೆದುಕೊಂಡು ಉತ್ತನೂರಿಗೆ ಹೋದರು.

ಮಗನಾದ ವೆಂಕಟರಾಮಾಚಾರ್ಯರ ಜೊತೆಯಲ್ಲಿ ಬಂದ ವೆಂಕಟ ನರಸಿಂಹಾಚಾರ್ಯರನ್ನು ದೂರದಲ್ಲಿ ಕಂಡಕೂಡಲೆ ಅಪರೋಕ್ಷ ಜ್ಞಾನಿಗಳಾದ ಶ್ರೀ ಗೋಪಾಲದಾಸರು "ಬನ್ನೀ ಬಾವನವರೆ ಚಿಂತಿಸಬೇಡಿ, ನಿಮ್ಮ ಮಗನ ಬಗ್ಗೆ ಯೋಚಿಸಬೇಡಿ" ಎಂಬ ಅಭಯ ವಚನಗಳನ್ನು ಆಡುತ್ತಾ ನೀವು ಹೊದ್ದಿರುವ ವಸ್ತ್ರದ ಅಂಚಿನಲ್ಲಿ ಕಟ್ಟಿರುವ ಎರಡು ಉತ್ತತ್ತಿಗಳನ್ನು ಕೊಡಿರಿ ನಾವು ಅದನ್ನು ನಮ್ಮ ದೇವರಿಗೆ ನೈವೇದ್ಯ ಮಾಡಿ ನಿಮಗು, ನಿಮ್ಮ ಹುಡುಗ ನಿಗೂ ದೇವರ ಪ್ರಸಾದವನ್ನು ಕೊಡುತ್ತೇನೆ ಎಂದು ಹೇಳಿದರು. ವೆಂಕಟ ನರಸಿಂಹಾಚಾರ್ಯರು ಶ್ರೀ ಗೋಪಾಲದಾಸರಲ್ಲಿ ಹೊರಡುವಾಗ "ಮಹನೀ ಯರ ದರ್ಶನಕ್ಕೆ ಹೋಗುವಾಗ ಬರಿಕೈಯಲ್ಲಿ ಹೋಗ ಬಾರದೆಂಬ ಶಾಸ್ತ್ರ ದಂತೆ. "ರಿಕ್ತಹಸ್ತೇನ ನೋಪೆಯಾತ್-ರಾಜಾನಂದೈವತಂ ಗುರುಂ" ಎಂಬಂತೆ ವೆಂಕಟನರಸಿಂಹಾಚಾರ್ಯ ಮಡದಿಯು ಅವರು ಹೊದೆಯುವ ಪಂಚೆಯ ಅಂಚಿನಲ್ಲಿ 2 ಉತ್ತತ್ತಿಗಳನ್ನು ಕಟ್ಟಿದ್ದರು. ಇದು ವೆಂಕಟನರಸಿಂಹಾಚಾರ್ಯ ರಿಗೆ ಗೊತ್ತಿರಲಿಲ್ಲ ಶ್ರೀ ಗೋಪಾಲದಾಸರು ಉತ್ತತ್ತಿಯನ್ನು ಕೇಳಿದಕೂಡಲೆ ನಾನು ಉತ್ತತ್ತಿಯನ್ನು ತಂದಿಲ್ಲವಲ್ಲ ಎಂಬುದಾಗಿ ಒಂದು ಕ್ಷಣಕಾಲ ಯೋಚಿಸಿ ಅಪರೋಕ್ಷ ಜ್ಞಾನಿಗಳ ಮಾತಿಗೆ ಬೆಲೆ ಕೊಟ್ಟು ಹೊದೆಯುವ ಪಂಚೆ ಅಂಚಿನಲ್ಲಿ ನೋಡಿದಾಗ ಎರಡು ಉತ್ತತ್ತಿಗಳು ಕಟ್ಟಿದ್ದವು. ಅದನ್ನು ಶ್ರೀ ಗೋಪಾಲದಾಸರಿಗೆ ಕೊಟ್ಟರು. ದಾಸವರೇಣ್ಯರು ಅದನ್ನು ಶ್ರೀ ಜನಮೆ ಜಯರಾಯನಿಂದ ಪ್ರತಿಷ್ಠಿತವಾಗಿ ನಿತ್ಯವು ತಮ್ಮಿಂದ ಪೂಜೆಗೊಳ್ಳುತ್ತಿದ್ದ ಶ್ರೀ ವೆಂಕಟೇಶ ದೇವರಿಗೆ ನೈವೇದ್ಯ ಮಾಡಿ ಪ್ರಸಾದವನ್ನು ಶ್ರೀ ವೆಂಕಟ ನರಸಿಂಹಾಚಾರ್ಯರಿಗೂ ಬಾಲಕನಾದ ಶ್ರೀ ವೆಂಕರಾಮಾಚಾರ್ಯರಿಗೂ ಕೊಟ್ಟರು. ಮತ್ತು ಈ ರೀತಿ ಹೇಳಿದರು. "ಎಲೈ ವೆಂಕಟನರಸಿಂಹಾ

ಚಾರ್ಯರೆ ನೀವು ನಿಮ್ಮ ಮಗನ ಬಗ್ಗೆ ಯೋಚಿಸಬೇಡಿ ಈತನು ಸಾಮಾನ್ಯ ವ್ಯಕ್ತಿಯಲ್ಲಾ ಇತ್ಯಾದಿಯಾಗಿ ಹೇಳಿ ರಹಸ್ಯದಲ್ಲಿ ಶ್ರೀ ವೆಂಕಟರಾಮಾರ್ಯರ ಹಿನ್ನಲೆಯನ್ನು ಸೂಕ್ಷ್ಮವಾಗಿ ತಿಳಿಸಿದರು.

ಹಿಂದಿನ ದಿನ ತಮಗೆ ಬೆಳಗಿನ ಝಾವದಲ್ಲಿ ಆಗಿದ್ದ ಸ್ವಪ್ನದಲ್ಲಿ ಅಗ್ನಿ ದೇವತೆಯು ಅಂಶಸಂಭೂತನಾದ ದೃಷ್ಟದ್ಯುಮ್ನನ ಅವತಾರಭೂತನಾದ ಶ್ರೀ ವೆಂಕಟರಾಮಾರ್ಯರು ಬಂದು ತಮಗೆ ಶ್ರೀ ಗೋಪಾಲದಾಸರಿಗೆ ಉಪ ದೇಶವಿತ್ತಂತೆ ಆದದನ್ನು ನೆನಪಿಗೆ ತಂದುಕೊಂಡು ಅದರ ವಿಷಯವಾಗಿ ನುಡಿ ಯನ್ನು ರಚಿಸಿರುತ್ತಾರೆ. ಅದು ಈ ರೀತಿ ಇದೆ. "ಗಣೇಶನ ಅಂಶ ಸಂಭೂತರು ಶ್ರೀ ಗೋಪಾಲದಾಸರು ಅಗ್ನಿಯ ಅಂಶ ಸಂಭೂತರು ಶ್ರೀ ವೆಂಕಟರಾಮಾರ್ಯರ ಪಲ್ಲವಿ "ಕಂಡೆ ಕರುಣಗಳೊಳಗೆ ಅಗ್ರೇಸರ ಪಾದ ಪಂಡಿತ ರಾಮಾರ್ಯರ ಪಲ್ಲವಿ".

ಗೋಪಾಲದಾಸರು ಶ್ರೀ ವೆಂಕಟನರಸಿಂಹಾಚಾರ್ಯರಿಗೆ ಅವರ ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ಈ ರೀತಿ ಹೇಳಿದರು. "ವೆಂಕಟನರಸಿಂಹಾ ಚಾರ್ಯರೇ ನೀವು ನಿತ್ಯವು ನಿಮ್ಮ ನಿತ್ಯ ದೇವರುಗಳ ಪೂಜೆ ಮೊದಲಾದವು ಆದಮೇಲೆ ಈ ಚಿಕ್ಕ ಬಾಲಕನನ್ನು ಹತ್ತಿರ ಕೂಡಿಸಿಕೊಂಡು ಸಕಲ ಶಾಸ್ತ್ರ ಗ್ರಂಥಗಳನ್ನೆಲ್ಲಾ ಪಾರಾಯಣ ಮಾಡಿರಿ ಶ್ರೀಮನ್ನ್ಯಾಯಸುಧಾದಿ ಗ್ರಥಗಳ ನ್ನೆಲ್ಲಾ ಪಾರಾಯಣ ಮಾಡಿ ಅದನ್ನೆಲ್ಲಾ ಈ ಹುಡುಗ ಕೇಳಿದ ಕೂಡಲೇ ಇವನಿಗೆ ಸಕಲ ಶಾಸ್ತ್ರ ಪಾಂಡಿತ್ಯವು ತಾನಾಗಿಯೆ ಕರತಲಾಮಲಕ ಕರಗತವಾಗಿ ದಿವ್ಯ ಪಾಂಡಿತ್ಯ ಲಭಿಸುತ್ತದೆ.

ಒಂದು ತುಂಬಿದ ಭತ್ತದ ಕಣಜದಿಂದ ಮತ್ತೊಂದು ಖಾಲೀ ಭತ್ತದ ಕಣಜಕ್ಕೆ ಧಾನ್ಯವನ್ನು ತುಂಬಲು ಎಷ್ಟು ಕಾಲ ಬೇಕು ? ಅದೇ ರೀತಿಯಾಗಿ ನಿಮ್ಮಲ್ಲಿ ತುಂಬಿ ತುಳುಕುತ್ತಿರುವ ಪಾಂಡಿತ್ಯವನ್ನು ನಿಮ್ಮ ಚಿರಂಜೀವಿಯಲ್ಲಿ ತುಂಬಲು ಬಹಳ ಕಷ್ಟವಾದ ಕೆಲಸವೇನಲ್ಲ. ಅತಿ ಶ್ರೇಷ್ಟವಾಗಿ ನಿಮ್ಮ ಕುಮಾರನು ಪ್ರಭಾವಶಾಲಿ ಪಂಡಿತನಾಗುತ್ತಾನೆ, ಚಿಂತಿಸಬೇಡಿರಿ. ಮುಂದೆ ಇವನು ಮಹಾಮಹಿಮೆಯುತನಾಗಿ ದಿಗಂತ ಕೀರ್ತಿ ವಿಶ್ರಾಂತ ಸಂಪನ್ನನಾಗಿ

ಅಪೋಘವಾದ ಮಧ್ವಶಾಸ್ತ್ರದಮೂಲಗ್ರಂಥಗಳಿಗೆ ವ್ಯಾಖ್ಯಾನಗಳನ್ನು ರಚಿಸಿ ಪವಾಡ ಪುರುಷನಾಗಿ ಬಾಳಿ ಸನ್ಯಾಸಿ ಆಶ್ರಮವನ್ನು ಸ್ವೀಕರಿಸಿ, ಅಪರೋಕ್ಷ ಜ್ಞಾನಿಗಳಲ್ಲಿ ಅಗ್ರಗಣ್ಯನಾಗಿ ಮತ್ತೊಬ್ಬರಾದ ಅಪರೋಕ್ಷ ಜ್ಞಾನಿಗಳಿಗೂ (ಅರಣ್ಯಕಾಚಾರ್ಯರು)ವಿದ್ಯಾಗುರುಗಳಾಗುವರು. ನಿಮ್ಮ ಚಿರಂಜೀವಿಯನ್ನು ನಿಮ್ಮ ಸನ್ನಿಧಿಯಲ್ಲಿ ಕುಳ್ಳರಿಸಿಕೊಂಡು, ಪರಮಾತ್ಮನ ಸನ್ನಿಧಾನದಲ್ಲಿ ಸಕಲ ಸದ್ಗ್ರಂಥಗಳನ್ನು ಪಾರಾಯಣ ಮಾಡಿರೆಂದು ಸೂಚಿಸಿದರು.

## ಗೋಪಾಲವಿಠಲರ ಕೃತ – ರಾಗ ಕಲ್ಯಾಣ – ಝಂಪಿತಾಳ

ಕಾಡೆಕರುಣೆಗಳೊಳಗೆ ಅಗ್ರೆಸರರಪಾದ ।
ಪಂಡಿತ ರಾಮಾರ್ಯರಾ ಕೊಂಡಾಡಲಿವರನ ಎಷ್ಟರವ ನಾನು ।
ಕಂಡೆ ಎನ್ನಮನಕುತ್ಸಾಹವಾಗಿ
ಸಿರಿ ವೆಂಕಟನರಸಿಂಹಾಚಾರ್ಯರೆಂಬ ವರಕ್ಷೀರ ಶರಧಿಯಲ್ಲಿ ।
ಪರಮಶೋಭಿತ ಚಂದ್ರನಂತೆ ಉದ್ಭವಿಸಿ
ಸುಜನರಿಗೆ ಆಹಲ್ಲಾದವಾಗಿ ।
ವರವೇದಶಾಸ್ತ್ರಗಳನ್ನೋದಿಸಿ ಶಿಷ್ಯ ಜನಕೆ ।
ವರದೊರದು ಉಪದೇಶಿಸಿ ।
ಮರಿಯದೆ ಒಂದು ಕ್ಷಣ ಬಿಡದೆ ಹರಿಪರವಾಗಿ ಇನ್ನು ।
ಇರುವ ಮಹಸುಗುಣರನ್ನು ಇಂದು
ಚರಣವೆಂದರೆ ಇವರೆ ಚರಣವೇ ಸುಖಕರ
ಹರಿಯಶಾತ್ರಾಪರವಾಗಿನ್ನು ।
ಕರಗಳೆಂದರೆ ಇವರ ಕರಗಳೇ ಮಂಗಳಕರ ।
ಹರಿ ಪೂಜೆಯಲ್ಲಿ ಸತತ ॥
ಕರನಗಳು ಮುಂತಾದ ಸರ್ವೇಂದ್ರಿಯಗಳಿಂದ ಹರಿಯನ್ನೆ ವಿಷಯಕರಿಸಿ।
ಇರುವ ಅನುಭೋಗವು ಇರತೋರಿ ತಮ್ಮ ನಿಜ ।
ಕುರುಹನೋಡೆಂದು ಚಪ್ಪರಿಸಿ ಬಿಗಿದಪ್ಪಿದುದ ॥೨॥
ಏಸು ಜನ್ಮದ ಸುಕೃತ ಎನಗೀ ವರ ಕರುಣಉಪ್ಪ

ದೇಶಸ್ವಪನದಿ ಆದುದಾ ।
ಕೇಶವನೆ ಈ ರೂಪದಿಂದ ಪೇಳಿದನ್ಯಾಗೋ ಲೇಶನ ಅರಿದನಲ್ಲಾ ॥
ದಾಸಗುರು ವಿಜಯರಾಯರೆ ಇಲ್ಲಿ ನಿಂದನ್ನ ಪೋಷಿಸುವ
ಬಗೆಯು ಹ್ಯಾಗೋ ।
ವಾಸುದೇವ ಹಯಾಸ್ಯ ಗೋಪಾಲ ವಿಠಲನ ।
ದಾಸರೊಳುತ್ತಮರ ದಯಕೆ ಸರಿಯುಂಟೆ ॥೩॥

ಮಹಾ ಭಾಗ್ಯ ಸಂಪನ್ನನಾಗುವ ಯೋಗ್ಯ ಇದೆಯೆಂದು ರಹಸ್ಯವಾಗಿ ಸೂಕ್ಷ್ಮವಾಗಿ ತಿಳಿಸಿದರು. ಶ್ರೀ ವೆಂಕಟನರಸಿಂಹಾಚಾರ್ಯರು, ಶ್ರೀ ಗೋಪಾಲದಾಸರು ಹೇಳಿದಂತೆಯೇ ಮಾಡಿದರು. ಆದ್ದರಿಂದಲೇ ಶ್ರೀವೆಂಕಟ ರಾಮಾಚಾರ್ಯರಿಗೆ ದಿವ್ಯಪ್ರತಿಭಾ ಲಬ್ಧವಾಯಿತು. ಇದನ್ನು ಅವರ ಸಾಕ್ಷಾತ್ ಶಿಷ್ಯರಾಗಿದ್ದ ಚಿಂಚೋಳಿಯ ಪ್ರಾಚೀನರಾದ ಕೃಷ್ಣಾಚಾರ್ಯ ಎಂಬುವರು. "ಶ್ರೀ ವ್ಯಾಸತತ್ವಜ್ಞ ತೀರ್ಥರ ಕರಾವಲಂಬನ ಸ್ತೋತ್ರದಲ್ಲಿ ವಿವರಿಸಿದ್ದಾರೆ.

ಬಾಲ್ಯೇಶವಾದಿ ಗುಣರಾಜಿತ ದಾಸವರ್ಯ
ಸಂಭಾವಿತೋರು ಮಹಿಮನ್ ಶುಭರಾಮನಾಮನ್ ।
ವಿದ್ಯಾಂನಿಜ ಪ್ರತಿಭಯಾ ಸಕಲಾಂ ವಿಜಾನನ್
ತತ್ತ್ವಜ್ಞತೀರ್ಥ ಮಮದೇಹಿ ಕರಾವ ಲಂಬಂ ॥೧॥
ಆದ್ಯಾಶ್ರಮಂ ಸಕಲ ಸೇವ್ಯ ಜುಷಾಣ ಸೇವಾಂ ಕುರ್ವನ್ ।
ಹರೇರ್ ಮುಖಜನೇಶ್ಚ ಗುರೋರ್ ಮಹಾತ್ಮನ್ ॥
ಆನಂದ ತೀರ್ಥ ಮುನಿಶಾಸ್ತ್ರ ವಿಚಾರ ಬುದ್ಧೇ
ತತ್ತ್ವಜ್ಞತೀರ್ಥ ಮಮದೇಹಿ ಕಲಾವಲಂಬಂ ॥೨॥

ಅಮಾನುಷವಾದ ಪ್ರತಿಭಾ ಸಂಪನ್ನರಾದ ಶ್ರೀ ವೆಂಕಟರಾಮಚಾರ್ಯರು ಶ್ರೀಮನ್ನ್ಯಾಯಸುಧಾ ಪ್ರವಚನವನ್ನು ಮಾಡಲು ಪ್ರಾರಂಭಿಸಿದರು. ಅಲೌಕಿಕ ವಾದ,ಪ್ರೌಢವಾದ ನ್ಯಾಯಸುಧಾ ಪಾಠ ಕೇಳಲು ಬೇರೆ ಬೇರೆ ಊರುಗಳಿಂದ ಶಿಷ್ಯರು ಇವರಲ್ಲಿ ಸೇರಿದರು. ನಿರಂತರ ಸುಧಾ ಪಾಠ ಪ್ರವಚನದಲ್ಲಿ ತಲ್ಲೀನ

ರಾಗಿದ್ದ ಇವರಿಗೆ, ಒಂದು ದಿನ ಸ್ವಪ್ನ ಸೂಚನೆಯಾಯಿತು. "ಬೀಜಪಲ್ಲಿ ಗ್ರಾಮಕ್ಕೆ ಬಾ, ಅಲ್ಲಿ ಶ್ರೀ ವ್ಯಾಸರಾಜರಿಂದ ಪ್ರತಿಷ್ಠಿತವಾದ ಶ್ರೀ ಮುಖ್ಯ ಪ್ರಾಣದೇವರು ಇದ್ದಾರೆ. ಅವರ ಸೇವೆ ಮಾಡು" ಎಂದು ಆ ಸ್ವಪ್ನಸೂಚನೆ ಯಾಯಿತು. ಬೀಜಪಲ್ಲಿ ಗ್ರಾಮಕ್ಕೆ ಶಿಷ್ಯ ಪರಿವಾರದೊಡನೆ ಅಲ್ಲಿಗೆ ಹೋದರು. ಇವರ ಆಗಮನದಿಂದ ಸಂತೋಷಭರಿತರಾದ ಆ ನಿವಾಸಿಗಳು, ಶ್ಯಾನುಭೋಗರು, ಗೌಡರು ಮುಂತಾದವರು ಆದರದಿಂದ ಸ್ವಾಗತಿಸಿ ಸಕಲ ಸೌಲಭ್ಯಗಳನ್ನು ಒದಗಿಸಿಕೊಟ್ಟರು.

ಹನ್ನೆರಡು ವರ್ಷಗಳ ಕಾಲ ಅಖಂಡವಾಗಿ ಶ್ರೀ ಮುಖ್ಯಪ್ರಾಣದೇವರ ಸೇವೆ ಮಾಡಿದುದರ ಫಲವಾಗಿ ಶ್ರೀ ಮುಖ್ಯಪ್ರಾಣದೇವರು ಇವರಿಗೆ "ಶ್ರೀ ವಾಸುದೇವ ವಿಠಲ" ಎಂಬ ಅಂಕಿತವನ್ನು ಅನುಗ್ರಹಿಸಿದರು. ಮತ್ತು ಇವರನ್ನು ಚ್ಯವನ ಋಷಿಗಳ ಆಶ್ರಮವಾದ ತುಂಗೆಯ ದಡದಲ್ಲಿರುವ "ವೇಣಿ ಸೋಮಪುರದಲ್ಲಿ ನೆಲಸಬೇಕೆಂದು ಸೂಚನೆಯಾಯಿತು." ಅದರಂತೆ ಇವರು ಶಿಷ್ಯ ಪರಿವಾರದೊಂದಿಗೆ ಬಂದು ವೇಣಿಸೋಮಪುರದಲ್ಲಿ ಬಂದು ನೆಲಸಿದರು.

ವೇಣಿ ಸೋಮಪುರ ಎಂದು ಆ ಗ್ರಾಮಕ್ಕೆ ಹೆಸರು ಬರಲು ಕಾರಣ ಉಂಟು, ಅದರ ಸುತ್ತಲೂ ಎತ್ತರ ಭಾಗದಲ್ಲಿರುವ ಕರಿಕಲ್ಲುಗಳ ವೇಣಿಯಂತೆ (ಹೆರಳಿನಂತೆ) ಸುರಳಿ ಸುರಳಿಯಾಗಿವೆ. ಆದ್ದರಿಂದ ಈ ಗ್ರಾಮಕ್ಕೆ ವೇಣಿ ಸೋಮಪುರ ಎಂದು ಹೆಸರು ಬಂದಿದೆ.

ಈ ಭೂ ಭಾಗಕ್ಕೆ ಸಮೀಪದಲ್ಲಿ "ಚ್ಯವನಕರ ದೋಣಿ" ಎಂಬ ಜಾಗ ಉಂಟು ಅಲ್ಲಿ ಚ್ಯವನ ಋಷಿಗಳ ಅವತಾರ ಪುರುಷರೊಬ್ಬರು ಇದ್ದರಂತೆ ಅವರು ಮಹಾತ್ಮರಾದ ಗಂಡಿ ಆಚಾರ್ಯರೆಂದು ಹಿರಿಯರು ಹೇಳಿದ್ದಾರೆ. ಆ ಗಂಡಿ ಆಚಾರ್ಯರು ಕಡಪಾ ಜಿಲ್ಲೆಯಲ್ಲಿ ಪ್ರಸಿದ್ಧವಾದ ಗಂಡಿ ಪ್ರಾಣ ದೇವರ ಸಮೀಪದಲ್ಲಿ ಇದ್ದರು, ಶ್ರೀ ಸತ್ಯನಾಥತೀರ್ಥರ ವಿದ್ಯಾಗುರುಗಳು. ಆ ಗಂಡಿ ಆಚಾರ್ಯರು ಪ್ರಕಾಂಡ ಪಂಡಿತರು. ಗಂಡಿ ಶ್ರೀ ಮುಖ್ಯ ಪ್ರಾಣ

ದೇವರ ಸೂಚನೆಯಂತೆ ಅವಸಾನ ಕಾಲದಲ್ಲಿ ಅವರು ವೇಣಿಸೋಮಪುರ ದಲ್ಲಿ ಶ್ರೀ ಐಜಿ ವೆಂಕಟರಾವಾಚಾರ್ಯರ ಪ್ರವಚನ ಕಾಲದಲ್ಲಿ ನಿರಂತರವಾಗಿ ಸನ್ನಿಹಿತರಾಗಿದ್ದರು. ಅವರಿಗೆ ಸರ್ಪ ದಂಶನದಿಂದ ಮರಣ ಯೋಗವಿತ್ತು. (ಚಿರಕಾಲ ವೇಣಿಸೋಮಪುರದಲ್ಲಿದ್ದು) ಶ್ರೀ ವೆಂಕಟರಾವಚಾರ್ಯರಗೆ ಸನ್ಯಾಸಾಶ್ರಮವಾದ ನಂತರ ಅವರ ಸನ್ನಿಧಾನದಲ್ಲಿದ್ದಾಗ ಒಂದು ದಿನ ಪ್ರಾರಬ್ಧ ಕರ್ಮಫಲವಾಗಿ ಒಂದು ಕೃಷ್ಣಸರ್ಪವು ಬಂದು ಕಚ್ಚಿತು. ಅದರಿಂದ ಅವರು ಇನ್ನೇನು ಪ್ರಾಣತ್ಯಾಗ ಮಾಡುವ ಕಾಲವು ಸನ್ನಿಹಿತವಾಯಿತು. ಆಗ ಶ್ರೀ ವ್ಯಾಸತತ್ವಜ್ಞತೀರ್ಥರು ಆ ಸರ್ಪದ ವಿಷಬಾಧೆಯನ್ನು ಪರಿಹರಿಸುತ್ತೇನೆ. ನಿಮ್ಮ ಅಕಾಲಮರಣವನ್ನು ಪರಿಹರಿಸುತ್ತೇನೆಂದು ಅಭಯವಚನವಿತ್ತರು. ಆದಾಗ್ಯೂ ಗಂಡೀ ಆಚಾರ್ಯರು ಅದಕ್ಕೆ ಒಪ್ಪಲಿಲ್ಲ. ನನ್ನ ಪ್ರಾರಬ್ಧಕರ್ಮ ಫಲವನ್ನು ನಾನು ಅನುಭವಿಸಬೇಕೆಂದು ಸೂಚನೆಯಾಗಿದೆ. ತಾವು ಪರಿಹರಿಸ ಬೇಡಿ ಎಂದು ಪ್ರಾರ್ಥಿಸಿ ಮೃತರಾದರು..

ಆ ಗಂಡೀ ಆಚಾರ್ಯರು ಅಲ್ಲಿದ್ದುದ್ದರ ಗುರುತಾಗಿ ಈಗಲೂ ಶ್ರೀ ವ್ಯಾಸತತ್ವಜ್ಞತೀರ್ಥರ ಬೃಂದಾವನದ ಸಮೀಪದ ಕಂಬದಲ್ಲಿ ಆ ಗಂಡೀ ಆಚಾರ್ಯರ ಪ್ರತೀಕವು ಇದೆ. ಸ್ವಪ್ನದ ಸೂಚನೆಯಂತೆ ಆ ಪ್ರತೀಕಕ್ಕೂ ನಿತ್ಯವೂ ಗಂದಾಕ್ಷತೆ ತೀರ್ಥ ನೈವೇದ್ಯಗಳು ನಡೆಯುತ್ತಲಿವೆ.

ಶ್ರೀ ವೆಂಕಟರಾವಮಾಚಾರ್ಯರ ಶಿಷ್ಯವರ್ಗವು ದಿನದಿನಕ್ಕೂ ಅಧಿಕ ವಾಗಿ ಸುಮಾರು 300 ಸಂಖ್ಯೆಗೂ ಮೀರಿತ್ತು. ನಿತ್ಯವೂ ಅಖಂಡವಾಗಿ ಸುಧಾಪಾಠ ಪ್ರವಚನವು ನಡೆಯುತ್ತಿತ್ತು. ಇವರ ಶಿಷ್ಯ ವರ್ಗದಲ್ಲಿ ಪ್ರಮುಖ ರಾದ ಶ್ರೀ ಅರಣ್ಯಕಾಚಾರ್ಯರು ಮಹಾಮೇಧಾವಿಗಳಾದ ಮಹಾನುಭಾವರು ಇವರೇ ಮುಂದೆ "ಶ್ರೀ ವಿಷ್ಣುತೀರ್ಥ" ರೆಂದು ಸನ್ಯಸ್ತರಾಗಿ ಪ್ರಸಿದ್ಧರಾಗಿ ಪ್ರಸಿದ್ಧವಾಗಿ ಇಂದಿಗೂ ಆ ಮಾದನೂರುಸ್ವಾಮಿಗಳೆಂದೇ ಮಾದನೂರಿನಲ್ಲಿ ಭಕ್ತರ ಇಷ್ಟಾರ್ಥಗಳನ್ನು ಕರುಣಿಸುತ್ತಿದ್ದಾರೆ.

ಆರಣ್ಯಕಾಚಾರ್ಯರು ತಮ್ಮ ವಿಧ್ಯಾಗುರುಗಳಾದ ಶ್ರೀ ವೆಂಕಟರಾವಚಾರ್ಯರ ವಿಷಯವಾಗಿ ಒಂದು ಪದ್ಯವನ್ನು ರಚಿಸಿರುತ್ತಾರೆ.

ಅದು ಈ ರೀತಿ ಇದೆ.

ದಿಕ್ ಪ್ರಾಂತಾತ್ತ ಪುಣ್ಯಕೀರ್ತಿ ಸುಲತಾ ಸಂಶೋಭಿತಸ್ಸಂತತಂ ।
ನಾನಾ ಶಿಷ್ಯತದೀಯ ಶಿಷ್ಯ ವಿಲಸಚ್ಛಾಕೋಪ ಶಾಖಾನ್ವಿತಃ ।
ಐಜೀ ವೆಂಕಟನಾರಸಿಂಹ ದಯಿತಾದಿವ್ಯಾಲವಾಲೋದ್ಭವಃ
ಸಂಭೂಯಾತ್ಸ ಕಲೇಷ್ಟದೋ
ಮಮಸದಾರಾಮಾರ್ಯ ಕಲ್ಪದ್ರುಮಃ ॥ಇತಿ॥

ಮತ್ತು ಶ್ರೀ ಸತ್ಯಪ್ರಿಯತೀರ್ಥರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದ ಮಹಾಭಾಷ್ಯ ಶ್ರೀನಿವಾಸಾಚಾರ್ಯರೂ ಸಹ ಶ್ರೀ ಐಜೀ ವೆಂಕಟರಾಮಾರ್ಯರ ವಿಧ್ಯಾಶಿಷ್ಯರು. ಇವರೂ ಕೂಡ ತಮ್ಮ ಗುರುಗಳಾದ ಐಜೀ ಆಚಾರ್ಯರ ವಿಷಯವಾಗಿ ಅಷ್ಟಕವನ್ನು ರಚಿಸಿರುತ್ತಾರೆ. ಅದು ಈ ರೀತಿಯಾಗಿದೆ.

"ರಮಾಕಾಂತಂ ಸಂತಂ ಹರಿಮನು ಭಜಂತಂಹಿ ವಿದುಷಾಂ,
ಪುರೋಗಣ್ಯಂ ವರ್ಣ್ಯಂ ಕ್ಷಿತಿಸುರಶರಣ್ಯಂ ಗುರುತಮಂ ।
ಲಸದ್ಗಾತ್ರಂ ಚಾತ್ರಸ್ತುತವರ ಚರಿತ್ರಂ ಪ್ರತಿದಿನಂ
ನಮೋನಿತ್ಯಂ ಭೂತ್ಯೈಶುಕ ಜನಕ ತತ್ವಜ್ಞ ಮುನಿಪಂ ಇತ್ಯಾದಿ.

ಶ್ರೀ ಗೋಪಾಲದಾಸರು ತೀರಿಕೊಂಡ ನಂತರ ಅವರ ತಮ್ಮಂದಿರೆಲ್ಲ (ಶ್ರೀ ವೆಂಕಟರಾಮಾರ್ಯರ) ಐಜೀ ಆಚಾರ್ಯರಲ್ಲಿಗೆ ಬಂದು ವಾಸಮಾಡುತ್ತಿದ್ದರು. ಅವರು ಮೂರು ಮಂದಿ ಇದ್ದರು.

1) ಮೊದಲನೆಯ ತಮ್ಮ ಗುರು ಗೋಪಾಲವಿಠ್ಠಲ ಅಂಕಿತರು ಶೀನಪ್ಪದಾಸರು.

2) ಎರಡನೆಯ ತಮ್ಮ ವರದಗೋಪಾಲವಿಠ್ಠಲ – ಅಂಕಿತರು ದಾಸಪ್ಪದಾಸರು.

3) ಮೂರನೆಯ ತಮ್ಮ ತಂದೆ ಗೋಪಾಲವಿಠ್ಠಲ - ಅಂಕಿತರು ರಂಗಪ್ಪದಾಸರು.

## ಪವಾಡಗಳು (ಬ್ರಹ್ಮ ರಾಕ್ಷಸನ ಜನ್ಮ ನಿವಾರಣೆ)

ಇವರ ಶಿಷ್ಯರಲ್ಲಿ ಒಬ್ಬನು ಶ್ರೀ ಮಂತ್ರಾಲಯದಲ್ಲಿರುವ ಶ್ರೀ ಗುರು ರಾಜರ ಸೇವೆಗಾಗಿ ಗುರುಗಳ ಅಪ್ಪಣೆಯನ್ನು ಕೇಳುತ್ತಿದ್ದನು. ಈತನ ಹೆಸರು ಕಲ್ಲೂರುಭೀಮಾಚಾರ್ಯರು. ಐಜೀ ಆಚಾರ್ಯರು ಹೋಗಬೇಡವೆಂದು ತಡೆಯು ತ್ತಿದ್ದರು. ಆದರೂ ಒಂದು ಸಲ ಹಠದಿಂದ ಬಲಾತ್ಕಾರವಾಗಿ ಹೋಗಲು ಅನುಮತಿ ಕೇಳಿದರು. ಆಗ ಶ್ರೀ ಐಜೀ ಆಚಾರ್ಯರು ನೀನು ಬಾಯಿ ಬಿಗಿ ಹಿಡಿ ಎಂದು ಹೇಳಿದರು. ಆತನು ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಸೇವೆಗಾಗಿ ಬಂದನು. ನಿತ್ಯವೂ ಪ್ರದಕ್ಷಿಣಾ ಸೇವೆ ಮಾಡುತ್ತಿದ್ದನು. ಬೇರೊಬ್ಬರು ಭಯಭಕ್ತಿಗಳಿಂದ ಶ್ರೀ ಗುರುರಾಜ ಬೃಂದಾವನ ಸಮೀಪದಲ್ಲಿ ಶ್ರೀ ಮಧ್ವರ ಸೂತ್ರ ಭಾಷ್ಯವನ್ನು ಪಾರಾಯಣ ಮಾಡುತ್ತಿದ್ದನು. ಹೀಗಿರುವಲ್ಲಿ ಪ್ರದಕ್ಷಿಣೆ ಮಾಡುತ್ತಿದ್ದವನು, ಪಾರಾಯಣ ಮಾಡುತ್ತಿದ್ದವನ ಹತ್ತಿರ ಹೋಗಿ, ಏನು ನೀನು ತಪ್ಪು ತಪ್ಪು ಪಾರಾ ಯಣ ಮಾಡುತ್ತಿರುವೆ ? ನಿನ್ನ ಪಾರಾಯಣ ನಿರರ್ಥಕ. ನಿಲ್ಲಿಸು, ಸಾಕು ಮಾಡು ಇತ್ಯಾದಿಯಾಗಿ ಕಟುವಾದ ನುಡಿಗಳನ್ನಾಡಿ, ಅವನು ಭಕ್ತಿ ಶ್ರದ್ಧೆಗ ಳಿಂದ ತನಗೆ ತಿಳಿದ ಮಟ್ಟಿಗೆ ಮಾಡುತ್ತಿದ್ದ ಭಾಷ್ಯದ ಪಾರಾಯಣವನ್ನು ನಿಲ್ಲಿಸುವಂತೆ ಮಾಡಿ ವಿಘ್ನಕಾರಿಯಾದನು. ಕೆಲವು ದಿನಗಳ ಸೇವೆ ಮಾಡಿ, ವೇಣಿಸೋಮಪುರಕ್ಕೆ ಗುರುಗಳ ಸಮೀಪಕ್ಕೆ ಹೋದನು. ಇವನನ್ನು ನೋಡಿ ಕೂಡಲೇ ಶ್ರೀ ಐಜೀ ಆಚಾರ್ಯರು ಏನೋ ನಿನ್ನ ಮುಖದ ಮೇಲೆ ಬ್ರಹ್ಮ ಹತ್ಯಾದೋಷವು ಕಂಡುಬರುತ್ತಿದೆ. ಯಾವ ಬ್ರಾಹ್ಮಣನ ಹತ್ಯೆ ಮಾಡಿದ್ದೀ ಯೋ ? ಅಥವಾ ಯಾವ ಬ್ರಾಹ್ಮಣನ ತೇಜೋವಧೆ ಮಾಡಿಬಂದೆಯೋ ಹೇಳು ಎಂದು ಗದರಿಸಿದರು. ಆಗ ಆ ಶಿಷ್ಯನು ನಡೆದುದ್ದನ್ನೆಲ್ಲಾ ಹೇಳಿದನು. ಪರಮ ಪವಿತ್ರವಾದ ಶ್ರೀಮಧ್ವಾಚಾರ್ಯರ ಸೂತ್ರ ಭಾಷ್ಯದ ಪಾರಾಯ ಣಕ್ಕೆ ಭಂಗ ತಂದುದರಿಂದ ನಿನಗೆ ಬ್ರಹ್ಮಹತ್ಯಾದೋಷವು ಬಂದಿದೆ. ಇನ್ನು ನೀನು ನಮ್ಮಲ್ಲಿರಬೇಡವೆಂದು ಹೇಳಿ ಅವನನ್ನು ತಮ್ಮ ಸನ್ನಿಧಾನದಿಂದ ಅವನ ಊರಿಗೆ ಕಳುಹಿಸಿದರು.

ಅವನು ಕೆಲವೇ ಸಮಯದಲ್ಲಿ ಮೃತನಾದನು. ಅವನಿಗೆ ಬ್ರಹ್ಮರಾಕ್ಷಸ

ಜನ್ಮವು ಬಂತು. ಆ ಬ್ರಹ್ಮರಾಕ್ಷಸನು ವೇಣಿಸೋಮಪುರದಲ್ಲಿರುವ ನದೀ ಸಮೀಪದಲ್ಲಿ ಬೆಳೆದಿರುವ ಒಂದು ಅರಳಿ ಮರದ ಮೇಲೆ ಬಂದು ನೆಲಸಿದನು.

ಶ್ರೀ ಐಜೀ ಆಚಾರ್ಯರ ಶಿಷ್ಯಂದಿರು ನಿತ್ಯವೂ ನದೀತೀರದಲ್ಲಿ ತಾವು ಕಲಿತ ಪಾಠಗಳನ್ನು ಚಿಂತನೆ ಮಾಡುತ್ತಿದ್ದಾಗ ಮರದಮೇಲಿನಿಂದ ಆ ಬ್ರಹ್ಮ ರಾಕ್ಷಸನು ಇವರುಗಳಿಗೆ, "ನೀವು ಈ ರೀತಿ ಹೇಳಿದ ವಾಕ್ಯಗಳು ತಪ್ಪು. ಹೀಗೆ ಹೇಳಿರಿ, ಹಾಗೆ ಹೇಳಿರಿ, ಮೂಲವಾಕ್ಯಗಳು ಈ ರೀತಿ ಇವೆ". ನಿಮ್ಮ ಗುರು ಗಳನ್ನು ಬೇಕಾದರೆ ಕೇಳಿರಿ, ನಾನೂ ಸಹ ನಿಮ್ಮಂತೆ ನಿಮ್ಮ ಗುರುಗಳಲ್ಲಿಯೇ ಹಿಂದೆ ಪಾಠ ಕೇಳುತ್ತಿದ್ದೆ. ಪಾಪಶೇಷದಿಂದ ನನಗೆ ಈ ಬ್ರಹ್ಮರಾಕ್ಷಸ ಜನ್ಮವು ಬಂದಿದೆ. ಇದರ ಬಿಡುಗಡೆಗಾಗಿ ಗುರುಗಳನ್ನು ಪ್ರಾರ್ಥಿಸುತ್ತಿದ್ದೇನೆಂದು, ಆ ರಾಕ್ಷಸನು ಶ್ರೀ ವರದಗೋಪಾಲವಿಠ್ಠಲರಾದ ಶ್ರೀ ಗೋಪಾಲದಾಸ ರವರ ತಮ್ಮಂದಿರಾದ ದಾಸಪ್ಪದಾಸರನ್ನು ತನ್ನ ಈ ಬ್ರಹ್ಮರಾಕ್ಷಸನ ಜನ್ಮದ ಪರಿ ಹಾರಕ್ಕಾಗಿ ಪ್ರಾರ್ಥಿಸಿದನು, ದಾಸಪ್ಪದಾಸರು ಶ್ರೀ ಐಜೀ ವೆಂಕಟರಾಮಾ ರ್ಯರನ್ನು ಪ್ರಾರ್ಥಿಸಿ, ಅವರಿಂದ ಆ ಶಿಷ್ಯನ ಬ್ರಹ್ಮರಾಕ್ಷಸ ಜನ್ಮವನ್ನು ಪರಿಹರಿಸಿದರು. ಶ್ರೀ ಐಜೀ ಆಚಾರ್ಯರು ಆ ಶಿಷ್ಯನ ಬ್ರಹ್ಮರಾಕ್ಷಸ ಜನ್ಮ ವನ್ನು ಪರಿಹರಿಸಲು ತಮ್ಮ ಒಂದು ಹಗಲಿನ ಸತ್ಕರ್ಮಾಚರಣೆಯ ಫಲವನ್ನು ಆತನಿಗೆ ಧಾರೆಎರೆದು ಆ ಜನ್ಮದಿಂದ ಆತನನ್ನು ಬಿಡುಗಡೆ ಮಾಡಿದರು.

### ನೀರಿನವನಿಂದ ಶಾಸ್ತ್ರಾರ್ಥ ಹೇಳಿಸಿದ್ದು

ಆಗಿನ ಕಾಲದಲ್ಲಿ ಗದ್ವಾಲ ಮಹಾರಾಜನ ಆಸ್ಥಾನದಲ್ಲಿ ಅನೇಕ ಜನ ವಿದ್ವಾಂಸರಿದ್ದರು. ಶ್ರೀ ಐಜೀ ಆಚಾರ್ಯರ ಮಹಿಮಾತಿಶಯವು ಗದ್ವಾಲ ರಾಜನಿಗೆ ಮನವರಿಕೆಯಾಗಿತ್ತು. ಶ್ರೀ ಐಜೀ ಆಚಾರ್ಯರ ಪಾಂಡಿತ್ಯ ವೂ ಮಹಿಮೆಯ ಮನವರಿಕೆಯಾಗಿದ್ದಿತು. ಅಪರೋಕ್ಷ ಜ್ಞಾನಿವರೇಣ್ಯರಾದ ಅರಣ್ಯಕಾಚಾರ್ಯರೇ ಐಜೀ ಆಚಾರ್ಯರ ಶಿಷ್ಯರೆಂದ ಮೇಲೆ ಇವರ ಮಹಿ ಮೆಯ ಬಗ್ಗೆ ಹೆಚ್ಚಿಗೆ ಹೇಳಬೇಕಾದುದೇನೂ ಇಲ್ಲ, ಎಷ್ಟು ಹೇಳಿದರೂ ಸಹ ಅದು ಅಲ್ಪವೇ ಸರಿ.

ಹೀಗಿರುವಲ್ಲಿ ಒಂದು ಸಲ ಉತ್ತರ ದೇಶದಿಂದ ಒಬ್ಬ ಮಹಾ ವಿದ್ವಾಂಸನು ಗದ್ವಾಲಿಗೆ ಬಂದನು. ಮಹಾರಾಜರನ್ನು ಭೇಟಿಮಾಡಿದನು. "ನಾನು ಒಬ್ಬ ಮಹಾವಿದ್ವಾಂಸನಿದ್ದೇನೆ. ನನ್ನ ಮುಂದೆ ಯಾವ ವಿದ್ವಾಂಸನೂ ವಾಕ್ಯಾರ್ಥಕ್ಕೆ ನಿಲ್ಲಲಾರ. ಆದ ಕಾರಣ ನನಗೆ ದಿಗ್ವಿಜಯದ ಜಯಪತ್ರಿಕೆಯನ್ನು ಕೊಡಿರಿ". ಇಲ್ಲವಾದರೆ ನಿಮ್ಮ ಆಸ್ಥಾನದ ವಿದ್ವಾಂಸರನ್ನು ನನ್ನೊಡನೆ ವಾಕ್ಯಾರ್ಥ ಮಾಡಲು ತಕ್ಕ ವ್ಯವಸ್ಥೆ ಮಾಡಿರಿ" ಎಂದು ಆಗ್ರಹಪಡಿಸಿದನು. ಗದ್ವಾಲ ಮಹಾರಾಜನಿಗೆ, ದಿಗ್ಭ್ರಮೆಯಾಯಿತು. ತನ್ನ ಹತ್ತಿರವಿದ್ದ ವಿದ್ವಾಂಸರನ್ನೆಲ್ಲಾ ಕರೆಯಿಸಿ ವಿಚಾರಮಾಡಿದನು. ಯಾರೂ ಸಹ ಮುಂದೆ ಬರಲಿಲ್ಲ. ಮುಂದೆ ಬಂದವರೆಲ್ಲಾ ನಿರುತ್ತರರಾದರು. ಆಗ ಮಹಾರಾಜನಿಗೆ ಐಜೀ ಆಚಾರ್ಯರ ಜ್ಞಾಪಕವಾಯಿತು. ಕೂಡಲೇ ಒಬ್ಬ ದೂತನನ್ನು ವೇಣಿಸೋಮಪುರಕ್ಕೆ ಕಳುಹಿಸಿದರು. ಶ್ರೀ ಐಜೀ ಆಚಾರ್ಯರೇ ಬಂದು ರಾಜಾಸ್ಥಾನದ ಮಾನವನ್ನು ಕಾಪಾಡಬೇಕೆಂದು ದೂತನ ಮೂಲಕ ಪ್ರಾರ್ಥನಾ ಪತ್ರಿಕೆಯನ್ನು ಕಳುಹಿಸಿದನು. ಆ ದೂತನು ಬಂದು ಶ್ರೀಯುತ ಆಚಾರ್ಯರಿಗೆ ರಾಜರ ಪ್ರಾರ್ಥನಾ ಪತ್ರಿಕೆಯನ್ನು ಕೊಟ್ಟನು. ಐಜೀ ಆಚಾರ್ಯರು ಆಗ ನೂರಾರು ಜನ ಶಿಷ್ಯರಿಗೆ ಶ್ರೀಮನ್ನ್ಯಾಯಸುಧಾ ಪಾಠವನ್ನು ಹೇಳುತ್ತಿದ್ದರು. ರಾಜನ ಪತ್ರವನ್ನು ಓದಿ ನೋಡಿದರು. ವಿಷಯವು ತಿಳಿಯಿತು. ಸುಧಾಪಾಠವು ನಿಲ್ಲುವಂತೇ ಇಲ್ಲ. ಆಗ ಐಜೀ ಆಚಾರ್ಯರು ಉದ್ಗ್ರಂಥಗಳನ್ನೋದುವ ಶಿಷ್ಯಂದಿರನ್ನೆಲ್ಲಾ ಗದ್ವಾಲಿಗೆಹೋಗಿ ವಾಕ್ಯಾರ್ಥವನ್ನು ಮಾಡಲು ಕೇಳಿದರು. ಯಾವ ಶಿಷ್ಯನೂ ಮುಂದೆ ಬರಲಿಲ್ಲ. ಆಗ ಶ್ರೀ ಐಜೀ ಆಚಾರ್ಯರವರು ನಿತ್ಯವೂ ತಮ್ಮ ಪಾಠ ಕಾಲದಲ್ಲಿ ಬಂದು ಕಂಬದ ಬದಿಯಲ್ಲಿ ನಿಂತಿರುತ್ತಿದ್ದ, ತಮ್ಮ ಸ್ನಾನಾದಿಗಳಿಗೆ ನೀರನ್ನು ತರುತ್ತಿದ್ದ "ನೀರಿನ ನರಸಪ್ಪನೆಂದೆ ಹೆಸರಾಗಿದ್ದ" ನರಸಪ್ಪನನ್ನು ನೋಡಿ ಹೇಳಿದರು. "ಎಲೋ ನರಸಪ್ಪ" ಒಂದು ಕೆಲಸವು ಆಗಬೇಕಾಗಿದೆ. ನೀನು ಹೋಗಿ ಮಾಡಿಕೊಂಡು ಬರುವೆಯಾ ಎಂದು ಕೇಳಿದರು.

ಶ್ರೀಮನ್ನ್ಯಾಯಸುಧಾದಿ ಗ್ರಂಥಗಳನ್ನೆಲ್ಲಾ ಶ್ರವಣ ಮಾಡಿ ವಿಶಿಷ್ಟ ಪಂಡಿತರೆನಿಸಿಕೊಂಡಿದ್ದು, ಅನೇಕ ಜನ ತಮ್ಮ ಶಿಷ್ಯಂದಿರನ್ನೆಲ್ಲಾ ಬಿಟ್ಟು

"ನನ್ನನ್ನು ಕೇಳುತ್ತಿದ್ದಾರೆ". ಏನೋ ನನ್ನ ವಿಷಯದಲ್ಲಿ ಕರುಣಿಸುವ ಸಲುವಾಗಿ ಹೇಳುತ್ತಿದ್ದಾರೆಂದು ತಿಳಿದು ನೀರಿನ ನರಸಪ್ಪನು "ಸ್ವಾಮಿ ಗುರುವರ್ಯರೇ" ತಮ್ಮ ಅಪ್ಪಣೆಯಾದರೆ ತಮ್ಮ ದಯದಿಂದ ತಾವು ಹೇಳುವ ಯಾವ ಕೆಲಸವೇ ಆಗಲಿ, ಅದನ್ನು ಶಿರಸಾವಹಿಸಿ ಮಾಡಲು ಸಿದ್ಧನಿದ್ದೇನೆ. ಅಪ್ಪಣೆ ದಯಪಾಲಿಸಬೇಕು". ಎಂದು ಮೂಢಭಕ್ತಿಶ್ರದ್ಧೆಗಳಿಂದ ಅಂಗಲಾಚಿ ನಮಸ್ಕರಿಸಿ ಪ್ರಾರ್ಥಿಸಿದನು.

ಆಗ ಶ್ರೀ ಐಜೀ ಆಚಾರ್ಯರು "ಎಲೋ ನರಸಪ್ಪ ಇಲ್ಲಿ ಬಾ, ಗದ್ವಾಲ ರಾಜಾಸ್ಥಾನಕ್ಕೆ ಉತ್ತರ ದೇಶದ ಮಹಾಪಂಡಿತನು ಒಬ್ಬನು ಬಂದಿದ್ದಾನಂತೆ, ಜಯಪತ್ರಿಕೆಯನ್ನು ಕೇಳುತ್ತಿದ್ದಾನಂತೆ, ಅದಕ್ಕಾಗಿ ಆ ಮಹಾರಾಜನು ನಮಗೆ ಆಹ್ವಾನಿಸಿರುತ್ತಾನೆ. "ನೀನು ಹೋಗಿ ಅವನೊಡನೆ ವಾದ ಮಾಡಿ ಜಯಪತ್ರಿಕೆಯನ್ನು ತೆಗೆದುಕೊಂಡು ಬಾ" ಇಗೋ ಶ್ರೀ ನೃಸಿಂಹ ದೇವರ ಪ್ರಾರ್ಥನೆ ಮಾಡಿದ್ದೇನೆ. ಈ ಮಂತ್ರ ಸಿದ್ಧವಾದ ಒಂದು ಬೊಗಸೆ ಮಂತ್ರಾಕ್ಷತೆಯನ್ನು ತೆಗೆದುಕೋ, ನಿನ್ನ ಹೊದ್ದಿಕೆ ಪಂಚೆಯಲ್ಲಿ ಜೋಪಾನವಾಗಿಟ್ಟುಕೋ. ವಾಕ್ಯಾರ್ಥಕ್ಕಾಗಿ ಕೂಡುವಾಗ ಇದನ್ನು ನಿನ್ನ ಹತ್ತಿರವಿಟ್ಟುಕೊಂಡಿರು. ಶ್ರೀ ದೇವರೇ ನಿನಗೆ ಜಯಗಳಿಸಿಕೊಡುತ್ತಾರೆ" ಎಂದು ಹೇಳಿ ಮಂತ್ರಸಿದ್ಧವಾದ ಒಂದು ಬೊಗಸೆ ಮಂತ್ರಾಕ್ಷತೆಯನ್ನು ಕೊಟ್ಟು ಆಶೀರ್ವದಿಸಿ ಕಳುಹಿಸಿಕೊಟ್ಟರು. ಇದನ್ನು ತಮ್ಮೆದುರಿಗೆ ನಡೆದುದನ್ನು ನೋಡಿ ಇತರ ಪ್ರೌಢವಿದ್ಯಾರ್ಥಿಗಳಾದ ಶಿಷ್ಯರಿಗೆ ಆಶ್ಚರ್ಯಕರವಾದ ಪವಾಡವೇ ಆಗಿತ್ತು.

ಶ್ರೀ ಐಜೀ ಆಚಾರ್ಯರ ಆಶೀರ್ವಾದ ಪಡೆದು, ಮಂತ್ರ ಸಿದ್ಧಿಯಾದ ಮಂತ್ರಾಕ್ಷತೆಯನ್ನು ತನ್ನ ಮಡಿ ಪಂಚೆಯ ಒಂದು ಭಾಗದಲ್ಲಿ ಭದ್ರಪಡಿಸಿ, ಅದನ್ನು ಆಚಾರ್ಯರಿಗಾಗಿ ಬಂದಿದ್ದ ಪಲ್ಲಕ್ಕಿಯಲ್ಲಿ ದೇವರ ಪೆಟ್ಟಿಗೆಯಂತೆ ಇಟ್ಟುಕೊಂಡು, ನರಸಪ್ಪನು ಗದ್ವಾಲಿಗೆ ಬಂದನು. ರಾಜರ ಭೇಟಿಯಾಯಿತು ಶ್ರೀ ಐಜೀ ಆಚಾರ್ಯರು ನನ್ನನ್ನು ವಾದಕ್ಕಾಗಿ ಕಳುಹಿಸಿರುತ್ತಾರೆ ಎಂದನು. ನೀರಿನ ನರಸಪ್ಪನ ಮಾತುಗಳನ್ನು ಕೇಳಿ ಮಹಾರಾಜರಿಗೆ ದಿಗ್ಭ್ರಮೆಯಾಯಿತು. ಇವನೊಬ್ಬ ನೀರನ್ನು ತರುವ ವಡ್ಡಶುಂಠ. ಇಂತಹವನನ್ನು ವಾದಕ್ಕೆ

ಕಳುಹಿಸಿದ್ದಾರಲ್ಲಾ ಎಂದು ಚಿಂತೆಗೆ ಈಡಾದನು. ಇತರ ವಿದ್ವಾಂಸರಿಗೂ ಆಶ್ಚರ್ಯವಾಯಿತು. ರಾಮಶಬ್ದವೂ ಸಹ ಬಾರದ ಇವನಿಂದ ವಾದ ಮಾಡಲು ಸಾಧ್ಯವೇ ! ಮಹಾ ವಿದ್ವಾಂಸನೊಡನೆ ನಾವೇ ಹಿಂದೆ ಸರಿದಿರುವಾಗ ಇವನೇನು ತಾನೇ ಮಾಡಿಯಾನು. ಏನೋ ಆಭಾಸವಾಗುತ್ತದೆ. ರಾಜಾಸ್ಥಾನದ ಮರ್ಯಾದೆಯು ಉಳಿಯುವಂತಿಲ್ಲ ಎಂದು ಇತರ ವಿದ್ವಾಂಸರು ಗುಸುಗುಸು ಮಾತನಾಡುತ್ತಿದ್ದರು. ಆದರೆ ರಾಜನಿಗೆ ಶ್ರೀ ಐಜೀ ಆಚಾರ್ಯರು ಪವಾಡಪುರುಷರೆಂಬ ನಂಬಿಕೆಯು ಇತ್ತು. ಆದ ಕಾರಣ ಭಯದ ಜೊತೆಗೆ ದೈರ್ಯವೂ ಕುಂದದೇ ಇತ್ತು. ಆಗಲಿ ದೈವೇಚ್ಛೆಯಿದ್ದಂತೇ ಆಗಲಿ ಎಂದು ನರಸಪ್ಪನೊಡನೆ ಉತ್ತರ ದೇಶದ ಮಹಾವಿದ್ವಾಂಸನಿಗೆ ವಾದ ಮಾಡಲು ಸಭೆಯನ್ನು ಮಹಾರಾಜನು ಏರ್ಪಡಿಸಿದನು. ಆಸ್ಥಾನದ ಮಹಾ ವಿದ್ವಾಂಸರೆಲ್ಲಾ ಕುತೂಹಲದಿಂದ ನೋಡುತ್ತಿದ್ದರು. ಉತ್ತರ ದೇಶದ ವಿದ್ವಾಂಸನೂ ಸಭೆಗೆ ಬಂದು ಕುಳಿತನು.

ಗದ್ವಾಲ ಮಹಾರಾಜನ ಅಧ್ಯಕ್ಷತೆಯಲ್ಲಿ ಸಭೆ ಸೇರಿತು. ಉತ್ತರದೇಶದ ಮಹಾ ವಿದ್ವಾಂಸನು ಶಾಸ್ತ್ರಾರ್ಥವನ್ನು ಮಂಡಿಸಿದನು. ಆಗ ನರಸಪ್ಪನು ಗುರುಗಳು ಅನುಗ್ರಹಿಸಿದ್ದ ಮಂತ್ರಾಕ್ಷತೆಗೆ ನಮಸ್ಕರಿಸಿ, ತನ್ನ ಬಲಭುಜಕ್ಕೆ ಅಧನ್ನು ಭದ್ರಪಡಿಸಿದ ಕೂಡಲೇ, ದಿವ್ಯತೇಜಸ್ಸು, ದಿವ್ಯವಾದ ಪ್ರತಿಭೆಯು ಮಿಂಚಿನಂತೆ ಆತನ ಮನೋಮಂಡಲದಲ್ಲಿ ಪ್ರಸರಿಸಿತು. ಅದ್ಭುತವಾದ ಸಂಸ್ಕೃತದ ಶಾಸ್ತ್ರಪ್ರಕ್ರಿಯಾಬದ್ಧವಾದ ವಾಣಿಯು ಲೀಲಾಜಾಲವಾಗಿ ಗಂಗಾ ಪ್ರವಾಹದಂತೆ ಹೊರಹೊಮ್ಮಿತು. ಉತ್ತರ ದೇಶದ ಮಹಾವಿದ್ವಾಂಸನ ಪೂರ್ವಪಕ್ಷಗಳನ್ನೆಲ್ಲಾ ಖಂಡತುಂಡವಾಗಿ ಖಂಡಿಸಿ ಆ ಮಹಾವಿದ್ವತ್ಸಭೆಯಲ್ಲಿ ವಿಜೃಂಭಿಸಿದನು. ಅಲ್ಲಿದ್ದ ಪಂಡಿತರೆಲ್ಲಾ ಇದೇನೋ ಪವಾಡವೇ ಸರಿ ಎಂದು ತಲೆದೂಗಿದರು. ಶ್ರೀ ಐಜೀ ಆಚಾರ್ಯರ ಪವಾಡವೇ ಇದೆಂದು ಭಾವಿಸಿ ಪ್ರಶಂಸಿಸಿದರು. ನರಸಪ್ಪನು ಉತ್ತರ ದೇಶದ ಮಹಾ ವಿದ್ವಾಂಸನನ್ನು ನಿರುತ್ತರನನ್ನಾಗಿ ಮಾಡಿ ವಿಜಯಶಾಲಿಯಾದನು. ಆಗ ಗದ್ವಾಲ ಮಹಾರಾಜನಿಗೆ ಆದ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ವಿಜಯಶಾಲಿಯಾಗಿ ವಿಜೃಂಭಿಸಿದ, ತೇಜಸ್ವಿಯಾಗಿ ಪ್ರಕಾಶಿಸುತ್ತಿದ್ದ ನರಸಪ್ಪನನ್ನು ಎಲ್ಲರೂ ಪ್ರಶಂಸಿಸಿದರು.

ಗದ್ವಾಲ ಮಹಾರಾಜರು ಶಾಲು ಜೋಡಿ, ವಿದ್ವತ್ಸಂಭಾವನೆಗಳನ್ನು ನರಸಪ್ಪನಿಗೆ ಬಹುಮಾನವಾಗಿ ಕೊಟ್ಟು ಗೌರವಿಸಿದರು. ಶ್ರೀ ಐಜೀ ಆಚಾರ್ಯರಿಗೂ ಕಾಣಿಕೆಯನ್ನು ಕಳುಹಿಸಿದನು. ಆದರೆ ನರಸಪ್ಪನು ಇಂದಿನ ಎಲ್ಲ ಜಯವೂ ನನ್ನೊಡನೆ ಇರತಕ್ಕ ನಮ್ಮ ಗುರುಗಳು ಕರುಣಿಸಿರುವ ಮಾತ್ರ ಪವಿತ್ರವಾದ ಮಂತ್ರಾಕ್ಷತೆಗಳ ಪ್ರಭಾವವೇ ಆಗಿರುತ್ತದೆ. ನನ್ನದೇನೂ ಇಲ್ಲವೆಂದು ಶ್ರೀ ಐಜೀ ಆಚಾರ್ಯರನ್ನು ಸ್ತೋತ್ರ ಮಾಡುತ್ತಾ ರಾಜನು ಕೊಟ್ಟ ಎಲ್ಲಾ ಗೌರವವನ್ನು ಆ ಮಂತ್ರಾಕ್ಷತೆಯ ಮೇಲಿಟ್ಟು ಗಂಟುಕಟ್ಟಿಕೊಂಡು ಅದನ್ನು ತನ್ನ ಪಲ್ಲಕ್ಕಿಯಲ್ಲಿಟ್ಟುಕೊಂಡು ತಾನು ನಡಗೆಯಿಂದ ವೇಣಸೋಮಪುರಕ್ಕೆ ಬಂದು, ನಡೆದುದ್ದನ್ನೆಲ್ಲಾ ಶ್ರೀ ಐಜೀ ಆಚಾರ್ಯರಿಗೆ ವಿಜ್ಞಾಪಿಸಿ, ಅವರ ಮುಂದೆ ತಾನು ತಂದಿದ್ದ ರಾಜಮರ್ಯಾದೆಯನ್ನು ಗುರುಗಳಿಗೆ ಅರ್ಪಿಸಿ, ನಮಸ್ಕರಿಸಿ ನಿಂತನು. ಆಗ ಶ್ರೀ ಐಜೀ ಆಚಾರ್ಯರು ನರಸಪ್ಪನನ್ನು ಕುರಿತು. ಎಲೋ ನರಸಪ್ಪ, ನಮ್ಮ ಇಷ್ಟದಂತೆ ದೇವರು ನಿನ್ನ ಮೂಲಕ ಎಲ್ಲವನ್ನೂ ಯಶಸ್ವಿಯಾಗಿ ಮಾಡಿಸಿದ್ದಾರೆ. ನಮಗೆ ಸಂತೋಷವಾಗಿದೆ. ನಿನಗೆ ಏನು ಬೇಕೋ ಕೇಳು, ಕೊಡುತ್ತೇವೆಂದರು. ಅದಕ್ಕೆ ನರಸಪ್ಪನು "ಗುರುಗಳೇ ನನಗೆ ಏನೂ ಬೇಡ, ತಮ್ಮ ದಯವು ಒಂದು ಇದ್ದರೆ ಸಾಕು. ನಾನು ತಮ್ಮಲ್ಲಿ ಬೇಡುವುದೇನೆಂದರೆ, ನನಗೆ ವಿದ್ಯೆಯೇ ಇಲ್ಲ. ನಾನು ಏನನ್ನೂ ಕಲಿತವನಲ್ಲ. ತಮ್ಮ ಮಂತ್ರಾಕ್ಷತೆಗಳ ಸನ್ನಿಧಾನವಿದ್ದಾಗ ನನಗೆ ದೇವರು ಏನು ಪಾಂಡಿತ್ಯವನ್ನು ಕರುಣಿಸಿದ್ದರೋ, ಆ ಪಾಂಡಿತ್ಯವು ನನಗೆ ಬರುವಂತೆ ಸ್ಥಿರವಾಗಿ ಇರುವಂತೆ ತಾವು ಅನುಗ್ರಹಿಸಿದರೆ ಸಾಕು. ಮಹಾಸ್ವಾಮಿ. ತಮ್ಮ ಶಿಷ್ಯನಾಗಿ ಯಾವಜ್ಜೀವಪರ್ಯಂತರವಾಗಿ ತಮ್ಮ ಸೇವೆ ಮಾಡಿ ಈ ಜನ್ಮವನ್ನು ಸಾರ್ಥಕಪಡಿಸಿಕೊಳ್ಳುತ್ತೇನೆ ಎಂದು ಅಂಗಲಾಚಿ ಬೇಡಿದನು. ಹಾಗೆಯೇ ಆಗಲೆಂದು ಗುರುಗಳಾದ ಶ್ರೀ ಐಜೀ ಆಚಾರ್ಯರು ಅನುಗ್ರಹಿಸಿದರು. ಅಂದಿನಿಂದ "ನೀರಿನ ನರಸಪ್ಪನು" ಘನವಿದ್ವಾಂಸನಾಗಿ ಬಾಳಿದನು, ಗುರುಗಳ ಸೇವೆಯಲ್ಲಿ ತತ್ಪರನಾಗಿ ತನ್ನ ಜನ್ಮವನ್ನು ಸಾರ್ಥಕಗೊಳಿಸಿದನು.

ಇದೊಂದು ಅಂದಿನ ದಿನದಲ್ಲಿ ನಡೆದ ಮಹಾಪವಾಡಗಳಲ್ಲೊಂದಾಗಿದೆ ಇದನ್ನು ಇಂದಿಗೂ ಆ ಮನೆತನದವರೂ, ಅಂದಿನ ಹಿರಿಯರ ಮೂಲಕ

ಕರ್ಣಾಕರ್ಣಿಕೆಯಾಗಿ ಕೇಳಿದ ಹಿರಿಯರೆಲ್ಲಾ ಹೇಳುತ್ತಿರುವ ಸತ್ಯವಾದ ಸಂಗತಿಯಾಗಿದೆ.

## ಪವಾಡ

ಶ್ರೀ ಐಜೀ ಆಚಾರ್ಯರಿಗೆ ಚಿರಕಾಲ ಸಂತಾನವಾಗಿರಲಿಲ್ಲ. ಆದಕ್ಕಾಗಿ ಅವರು ದೇವರನ್ನು ಪ್ರಾರ್ಥಿಸಿದರು. ಶ್ರೀಹರಿಯು ಇವರ ಪ್ರಾರ್ಥನೆಗೆ ಪ್ರಸನ್ನನಾಗಿ ಸ್ವಪ್ನದಲ್ಲಿ ಸೂಚಿಸಿದನು. " ವಲ್ಲೂರು " ಎಂಬ ಗ್ರಾಮದ ಕೆರೆಯ ತೂಮಿನ ಕೆಳಗಡೆ ಭೂಗತವಾಗಿ ಶ್ರೀ ಸಂತಾನ ವೇಣುಗೋಪಾಲ ಕೃಷ್ಣನ ಪ್ರತಿಮೆಯಿರುತ್ತದೆ. ಶ್ರೀ ರುಕ್ಮಿಣೀ ಸತ್ಯಭಾಮೆ ದೇವಿಯರ ಪ್ರತೀಕಗಳಿಂದ ಕಂಗೊಳಿಸುತ್ತಲಿದೆ. ಶಿಲ್ಪಶಾಸ್ತ್ರದ ವಿರುದ್ಧವಾಗಿ ಬಲಗಾಲಿನ ಮೇಲೆ ಎಡಗಾಲು ನೀಳವಾಗಿದೆ. ಬಹುರಮ್ಯವಾಗಿದೆ.

ಆ ವೇಣುಗೋಪಾಲಕೃಷ್ಣ ಪ್ರತಿಮೆಯನ್ನು ತಂದು ವೇಣಿ ಸೋಮಪುರದಲ್ಲಿ ಪ್ರತಿಷ್ಠೆ ಮಾಡು ಎಂದು ದೈವಪ್ರೇರಣೆಯಾಯಿತು. ಅದರಂತೆ ಪ್ರತಿಷ್ಠೆ ಮಾಡಿದರು. ಶ್ರೀ ವೇಣುಗೋಪಾಲಕೃಷ್ಣ ದೇವರ ಪ್ರತಿಷ್ಠಾ ಕಾಲದಲ್ಲಿ ಐದು ನುಡಿಗಳಿಂದ ಕೂಡಿದ ಒಂದು ದೇವರ ನಾಮವನ್ನು (ಶ್ರೀ ಬಾಗಣ್ಣದಾಸರ ಎರಡನೇ ತಮ್ಮಂದಿರಾದ ಸೀನಪ್ಪದಾಸರು [ಗುರುಗೋಪಾಲವಿಟ್ಠಲ].) ರಚಿಸುತ್ತಾರೆ.

ವಲ್ಲೂರು ಗ್ರಾಮದ ಪರಿಸರದಲ್ಲಿ ಸ್ವಪ್ನ ಸೂಚನೆಯಂತೆ ಭೂಶೋಧನೆ ಮಾಡಿದಾಗ ಶಿಲ್ಪಶಾಸ್ತ್ರ ಸಮ್ಮತವಾದ ಕೆರೆಯ ತೂಬಿನ ಕೆಳಗೆ ಒಂದು ಶ್ರೀ ವೇಣುಗೋಪಾಲಕೃಷ್ಣ ಪ್ರತಿಮೆಯು ಸಿಕ್ಕಿತು. ಆದರೆ ನನಗೆ ಸ್ವಪ್ನದಲ್ಲಿ ದರ್ಶನ ಕೊಟ್ಟ ಪ್ರತಿಮೆಯು ಇದಲ್ಲವಲ್ಲಾ ಎಂದು ಚಿಂತೆಗೆ ಈಡಾದರು. ಅದೇ ದಿನ ರಾತ್ರಿ ಪುನಃ ಸ್ವಪ್ನದಲ್ಲಿ ನಿನಗೆ ಸಿಕ್ಕಿದ ಪ್ರತಿಮೆಯ ಜಾಗದಲ್ಲೇ ಕೆಳಭಾಗದಲ್ಲಿ ಬಲಗಾಲಿನ ಮೇಲೆ ಎಡಗಾಲಿರುವ ಮತ್ತೊಂದು ಪ್ರತಿಮೆ ಇರುತ್ತದೆ. ಅದನ್ನು ಭೂ ಶೋಧಿಸಿ ತೆಗೆದುಕೊಂಡು ಹೋಗಿ ವೇಣಿ ಸೋಮಪುರದಲ್ಲಿ ಪ್ರತಿಷ್ಠೆ ಮಾಡು ಎಂದು ಸೂಚನೆಯಾಯಿತು.

ಐಜೀ ಸ್ವಾಮಿಗಳಿಂದ ಪ್ರತಿಷ್ಠಾಪಿಸಿದ ಗೋಪಾಲಕೃಷ್ಣನ ಪತಿಷ್ಠಾ ಕಾಲದಲ್ಲಿ ಮಾಡಿರುವ ಪದ :—

ಮೋಹನರಾಗ—ಜುಂಪೇತಾಳ

(ನಂದವ್ರಜ ಮಧುರೆ ದ್ವಾರಕಾಪುರಿ ಬಿಟ್ಟು ।
ಬಂದದ್ದೆ ಬಹುಲಾಭವೋ ಇಂದಿರಾಪತಿ ದಯಾಸಿಂಧು
ಸುಖಪೂರ್ಣ ಗೋವಿಂದ ಲಾಲಿಸೋ ಬಿನ್ನಪ ಕೃಷ್ಣ ಅ.ಪ.
ಪುಟ್ಟಿದಾಗಲೆ ರಾತ್ರಿ ಮಳೆಯೊಳಗೆ ನಿನ್ನ
ಎಬ್ಬಟ್ಟಿದರೂ ಪರಸದನಕೆ ಕೊಟ್ಟಳೊಬ್ಬಳು
ವಿಷದ ಸ್ತನವ ಬಂಡಿಯು ಬುಡದಲಿಟ್ಟು ।
ನಿನ್ನನು ಮರೆತರೊ ಕಟ್ಟುವಾಡಿ ತರುವ ಕಾಯಿಸಿ ಬೆರಳಿಂದ ।
ಬೆಟ್ಟವನು ಹೊರಸಿದರಲಾ ಕೃಷ್ಣ
ಉತ್ಕೃಷ್ಟ ಬಲನಾದ ಕಾರಣ ಇಟ್ಟು ।
ಆಟ್ಟಳಿಯ ಜರಿದು ಮೆರೆದೆ ಕೃಷ್ಣ ॥೧॥)

ಪಾಲುಬೆಣ್ಣೆ ಕಳ್ಳನೆಂದು ಒರಳಿಗೆ ಕಟ್ಟಿ ಕೋಲಲಿ ಬಡಿ ಬಂದರೋ
ಶ್ರೀಲಕುಮಿಪತಿ ನಿನ್ನ ಜಾರನೆಂದೆನುತ
ತಮ್ಮಾಲಯಕೆ ಬರಗೊಡರಲಾ
ಕಾಲು ತೊಳಸಿ ಮಣೆಯನಿಡಿಸಿ ರಥವನೆಹೊಡೆಸಿ
ಊಳಿಗಕೆ ಮಾಡಿದರಲಾ
ಪೇಳಲೇ ನಿನ್ನು ನಿನಗವರು ಮಾಡಿದ್ದು ಕೃಪಾಳು
ತ್ರೈಲೋಕ್ಯನಾಥ ಕೃಷ್ಣ ॥೨॥

ಪರಮಾತ್ಮನೆಂದು ಬಿನ್ನೈಪಿದೆನೊ ನಿನಗೆ ಇದು
ಇರತಕ್ಕ ರಮ್ಯ ಸ್ಥಳವೋ
ಕರೆಸು ಪತಿಸುತ ಪರಿವಾರ ಜನರೆಲ್ಲರನು
ಸ್ಥಿರವಾಗಿ ವಾಸ ಮಾಡೋ

ಮರಳಿ ನೀನಾ ಸ್ಥಳಕೆ ಪೋದರೆ ಹಿಂದಿವಾ ।
ತೆರೆದಿ ಮಾಡದೆ ಬಿಡರಲಾ
ಗುರುವರ್ಯ ವೆಂಕಟರಾಮಾರ್ಯರು ನಿನ್ನ ।
ಪರಿ ಪರಿ ಪೂಜಿಸುವರೋ ಕೃಷ್ಣ ॥೩॥

ಮಣಿಗಾರನಂತೆ ಅದೂ ಇದೂ ಕೊಡು ಎಂದು ।
ದಣಿಸಿ ಬೇಡುವರಲ್ಲವೂ
ಋಣತ್ರಯದೊಳಗೆರಡು ತಿದ್ದಿಹರು ಇನ್ನೊಂದು ।
ಋಣ ಅವರಿಗುಳಿದಿಹುದೋ
ಗುಣನಿಧಿಯೆ ಅದ ನೀನು ಇತ್ತು ಪಾಲಿಸೆ ನಿನ್ನ ।
ಘನತೆ ಲೋಕದಿ ಮೆರೆವುದೊ
ದನುಜದಲ್ಲಣ ವಿಘ್ನತತಿಗಳೆದುರೆ ನಿನಗೆ ।
ಪ್ರಣತಾರ್ತಿಹರ ಕಾಮದ ಕೃಷ್ಣ ॥೪॥

ನೀನಿದ್ದ ಸ್ಥಾನದಲಿ ಸಕಲತೀರ್ಥಗಳುಂಟು ।
ನೀನಿದ್ದುದೇ ಕ್ಷೇತ್ರವೋ
ನೀನು ಎಲ್ಲಿರಲಲ್ಲಿ ಬ್ರಹ್ಮಾದಿ ದಿವಿಜರಾ।
ಸ್ಥಾನದಲಿ ನೆಲೆಸಿಪ್ಪರೊ
ನೀನಿದ್ದ ಸ್ಥಾನವೇ ವೈಕುಂಠವೆಂದೆನಿಸಿ
ಮೌನಿಗಳು ಸೇವಿಸುವರೊ
ಪ್ರಾಣಪತಿ ಶ್ರೀ ಗುರು ಗೋಪಾಲವಿಠ್ಠಲ ।
ಆನಂದ ನಿಲಯವಾಸ ಶ್ರೀಕೃಷ್ಣ ॥೫॥

ಒಂದಾವರ್ತಿ ಶ್ರೀ ಐಜೀ ವೆಂಕಟರಮಣಾಚಾರ್ಯರು ತಿರುಪತಿಗೆ ಯಾತ್ರಾರ್ಥಿಗಳಾಗಿ ಹೋದರು. ಅಲ್ಲಿದ್ದ ಶ್ರೀ ದಿಗ್ಗಾವಿ ಆಚಾರ್ಯರ ದರ್ಶನವಾಯಿತು. ಆ ಆಚಾರ್ಯರು ಇವರಿಗೆ ಸಂತಾನವಿಲ್ಲದುದನ್ನು ತಿಳಿದು ಎರಡು ಹಣ್ಣುಗಳನ್ನು ಕೊಟ್ಟರು. ಶ್ರೀ ಐಜೀ ಆಚಾರ್ಯರಿಗೆ ಮೊದಲನೆಯ ಹೆಂಡತಿಯಲ್ಲಿ ಕುಂ॥ ಲಕ್ಷ್ಮಕ್ಕ ಎಂಬ ಓರ್ವ ಹೆಣ್ಣು ಮಗಳಿದ್ದಳು ಇವರ

ನಿತ್ಯಾಗ್ನಿ ಹೋತ್ರಿಗಳಾಗಿದ್ದರಿಂದ ಎರಡನೆಯ ವಿವಾಹವೂ ಆಗಿತ್ತು ಶ್ರೀ ದಿಗ್ಗಾವಿ ಆಚಾರ್ಯರು ಕೊಟ್ಟಿದ್ದ ಎರಡು ಹಣ್ಣುಗಳನ್ನು ನಮ್ಮ ದೇವರ ನೈವೇದ್ಯ ಮಾಡು ನನಗೆ ಕೊಡುತ್ತೇನೆಂದು ಮಗಳ ಹತ್ತಿರ ಹೇಳಿ, ಅವಳ ಕೈಗೆ ಕೊಟ್ಟಿದ್ದರು. ಆದರೆ ಇವರ ಸ್ನಾನಾಹ್ನೀಕಾದಿಗಳೆಲ್ಲಾ ಮುಗಿದು ದೇವರಪೂಜಾ ಆಗುವ ವೇಳೆಯು ಬಹಳ ಕಾಲವಾಗಿತ್ತು ಆದ ಕಾರಣ ಹಸಿವನ್ನು ತಾಳಲಾರದೇ ಆ ಹೆಣ್ಣು ಮಗಳು ಅವೆರಡೂ ಹಣ್ಣು ಗಳನ್ನು ತಿಂದು ಬಿಟ್ಟಳು. ಇದು ಆಚಾರ್ಯರಿಗೆ ತಿಳಿಯಿತು. ಆಗ ಐಜೀ ಆಚಾರ್ಯರು ಇದು ದೈವೇಚ್ಛೆಯೆಂದು ತಿಳಿದು ಮಗಳಿಗೆ ಈ ರೀತಿ ಹೇಳಿದರು. ನಿನ್ನ ಹೊಟ್ಟೆಯಲ್ಲಿ ಎರಡು ಗಂಡು ಮಕ್ಕಳು ಹುಟ್ಟುತ್ತವೆ. ಅದರಲ್ಲಿ ಮೊದಲನೆಯ ಗಂಡು ಮಗುವು ಹುಟ್ಟಿದ ಕೂಡಲೇ ಅದಕ್ಕೆ ಭೂಮಿಯ ಸ್ಪರ್ಶವು ಆಗದಂತೆ ನನ್ನ ಉಡಿಗೆ ಹಾಕಿಬಿಡು. ಅದಕ್ಕೆ ನಾನು ಕಿವಿಯಲ್ಲಿ ಉಪದೇಶ ಮಾಡಿ ಮತ್ತೆ ಅದು ದೊಡ್ಡವ ನಾಗುವ ವರೆವಿಗೂ ನೀನೇ ಸಾಕು. ಇತ್ಯಾದಿಯಾಗಿ ಹೇಳಿದರು. ಅವರಂತೆಯೇ ಆಯಿತು. ಆ ಮೊದಲನೆಯ ಕೂಸೇ ಆದಿ ಗೋಪಾಲಕೃಷ್ಣಾಚಾರ್ಯರು.

ಆ ಗೋಪಾಲಕೃಷ್ಣಾಚಾರ್ಯರನ್ನೇ ದತ್ತು ಪುತ್ರನನ್ನಾಗಿ ಐಜೀ ಆಚಾರ್ಯರು ಸ್ವೀಕರಿಸಿ ವಿದ್ಯಾ ಹೇಳಿದರು ಅವರು ಚತುಶ್ಶಾಸ್ತ್ರ ಪಾರಂಗತರಾದ ದಿಗ್ದಂತಿ ಪಂಡಿತರಾದರು. (ಶ್ರೀ ಐಜೀ ಆಚಾರ್ಯರ ಶಿಷ್ಯರಾದ ಮಹಾಬಾಷ್ಯ ಶ್ರೀನಿವಾಸಾಚಾರ್ಯರು ಗುರುಗಳ ಅಷ್ಟಕದಲ್ಲಿ ಇವರನ್ನು (ಗೋಪಾಲಕೃಷ್ಣಾಚಾರ್ಯ) ಈ ರೀತಿಯಾಗಿ ವರ್ಣಿಸಿದ್ದಾರೆ.

ಅನೂಚಾನಂ ಜಾನಂ ಪ್ರಥಮ ವಯಸಾವ್ಯಾಪ್ತ ಯಶಸಂ
ಸುತಂ ಗೋಪಾಲಾಖ್ಯಂ ಪ್ರವಚನ ಚಣಂ
ವಾದ ನಿಪುಣಂ ಸುಕೃತ್ವಾ
ಯಃಪ್ರಾಪ ಸ್ವಯಮಪಿಚ ಸನ್ಯಾಸ ಪದವೀಂ
ನಮೋನಿತ್ಯಂ ಭೂತ್ಯೈ ಶುಕಜನಕ ತತ್ವಜ್ಞ ಮುನಿಪಂ ॥

ಆ ವಂಶದವರೇ ಈಗಲೂ ವೇಣೀಸೋಮಪುರದಲ್ಲಿ ನೆಲಸಿರುತ್ತಾರೆ. ಗೋಪಾಲಕೃಷ್ಣಾಚಾರ್ಯರಾಗಿ ಶ್ರೀ ಗೋಪಾಲ ದಾಸರು ಅವತರಿಸಿದ ರೆಂದು ಶ್ರೀ ಗೋಪಾಲದಾಸರ ತಮ್ಮಂದಿರಾದ ತಂದೆ ಗೋಪಾಲವಿಠಲಾಂಕಿತ ರಾದ ರಂಗಪ್ಪದಾಸರು ಒಂದುನುಡಿಯಲ್ಲಿ ಸೂಚಿಸಿರುತ್ತಾರೆ. ಆ ನುಡಿಯು ಈ ರೀತಿ ಇದೆ.

"ಕ್ಷಿತಿಯೊಳಗೆ ಗುರುವ್ಯಾಸತತ್ವಜ್ಞರ ಸುತರೆನಿಸಿ ಸಚ್ಛಾಸ್ತ್ರವಾ ।
ಪ್ರತಿದಿನದಿ ಪ್ರವಚನ ಮಾಡುತ ಹುತವಹನ ಮುದಬಡಿಸುವಾ ॥

ಎಂದಿದ್ದಾರೆ. ಇದರಲ್ಲಿ ಶ್ರೀ ಗೋಪಾಲಕೃಷ್ಣಾಚಾರ್ಯರು ಶ್ರೀ ಗೋಪಾಲ ದಾಸರ ಅವತಾರವೆಂದೂ, ಶ್ರೀ ಐಜೀ ವೆಂಕಟರಾಮಾರ್ಯರು "ಅಗ್ನಿಯ ಅಂಶಸಂಭೂತರೆಂದೂ ಸ್ಪಷ್ಟಪಡಿಸಿರುತ್ತಾರೆ.

### ಐತಿಹಾಸಿಕ ವಿಚಾರ

ಮಕ್ಕಳಾದ ಗೋಪಾಲಕೃಷ್ಣಾಚಾರ್ಯರಿಗೆ ಬಂದ ಅಪಮೃತ್ಯುವನ್ನು ಪರಿಹರಿಸಿದ ಬಗ್ಗೆ ಈ ಕೆಳಗೆ ಕಂಡಂತಿದೆ.

ಇವರ ಪುತ್ರರಾದ ಗೋಪಾಲಕೃಷ್ಣಾಚಾರ್ಯರಿಗೆ ಒಂದುಸಲ ವಿಷಮ ಶೀತಜ್ವರ ಬಂದಿತು. ಔಷಧೋಪಚಾರಗಳೂ ನಡೆಯಿತು. ಆದಾಗ್ಯೂ ಗುಣ ಮುಖವಾಗಲಿಲ್ಲ. ಆಗ ಶ್ರೀ ಐಜೀ ಆಚಾರ್ಯರು ಉಗ್ರವಾದ ಶ್ರೀನೃಸಿಂಹ ಮಂತ್ರವನ್ನು ಅಪಮೃತ್ಯು ಪರಿಹಾರಕ್ಕಾಗಿ ಜಪಿಸಲು ತಮ್ಮ ಆಪ್ತ ಶಿಷ್ಯರೂ ತಪಸ್ವಿಗಳೂ ಆದ ಶ್ರೀ ಅಡವಿ ಆಚಾರ್ಯರಿಗೆ ಹೇಳಿ ಅವರಿಂದ ಜಪಮಾಡಿ ಸಿದರು. ಉಪವಾಸದಿಂದ ತುಂಗಾ ನದಿಯ ಒಂದು ಸೆಳವು ಭಾಗದಲ್ಲಿ ನಿಂತು ಘೋರವಾಗಿ ಶ್ರೀ ಅಡವಿ ಆಚಾರ್ಯರು ಮೂವತ್ತೆರಡು ಅಕ್ಷರಗಳುಳ್ಳ ಶ್ರೀಮನ್ನೃಸಿಂಹ ಮಹಾಮಂತ್ರವನ್ನು ಜಪಿಸಿದರು. ಈಗಲೂ ಸಹ ಅಲ್ಲಿ "ಅಡವಿ ಸೆಳವು" ಎಂಬ ಸೆಳವು ಭಾಗವಿದೆ. ಇತ್ತ ತಾವು ಶ್ರೀ ಗೋಪಾಲ

ಕೃಷ್ಣನನ್ನು ಭಕ್ತಿಯಿಂದ ಪ್ರಾರ್ಥಿಸಿದರು. ಆಗ ಅಪಮೃತ್ಯು ಪರಿಹಾರವಾಯಿತು. ಆ ಪ್ರಾರ್ಥನೆಯು ಈ ರೀತಿ ಇದೆ.

ಕಾಂಬೋದಿ ರಾಗ—ಝಂಪಿ ತಾಳ

"ವಿನಯದಲಿ ವಿಜ್ಞಾಪನೆ ಮಾಡುವೆ ಈ ।
ತನಯನ್ನ ಪಾಲಿಸುವುದೆಂದು ನಾನು (ಪಲ್ಲವಿ)
ನಿನ್ನವನು ಮೊದಲಿಗೂ ಇವನೆಂದು ಬಲ್ಲೆಲ್ಲ ।
ಜನಿಸಿ ಇಹನು ಎನ್ನಲ್ಲಿ ಮತ್ತು
ಧನ್ಯನಾಗುವ ಮಧ್ವತಂತ್ರಗಳನೋದಿನ್ನು ।
ಅನ್ಯವಲ್ಲವೋ ಇವನು ನಿನಗೆ ಎಂದೆಂದು
ಕೇಳಿದಾಗಿವತನ್ನ ಶಿಷ್ಯರಿಗೆ ಶಾಸ್ತ್ರಗಳ ।
ಪೇಳಿ ಪೆಸರೆತ್ತಿಹ ಲೋಕದೊಳಗೆ ।
ಆಳಿದಾನೀನೆಂದು ನಾಮಗಳು ರಚಿಸುತ ।
ಬಾಳಲಿ ಬಹುಕಾಲ ಗೋಪಾಲದಾಸ ।
ಏಸು ಜನರಿಗೆ ಎನ್ನಿಂದ ನೀ ಪೇಳಿಸಿದಿ ।
ಲೇಸು ಲೇಸೆಂದು ಲೋಕದಿ ಮೆರೆಸಿದೆಯೋ
ಈಸುತನಯ ಎನ್ನತೆರ ನಿನ್ನವನೆಂದರಿತು ।
ವಾಸುದೇವವಿಠಲ ಕಾಪಾಡೋ ಕರುಣಿ ॥ಇತಿ॥

ತಮ್ಮ ಪುತ್ರರಾದ ಗೋಪಾಲಕೃಷ್ಣಾಚಾರ್ಯರ ಅಪಮೃತ್ಯು ಪರಿಹಾರಕ್ಕಾಗಿ ಅನೇಕ ವಿಧಗಳಾದ ಜಪಗಳು ಹೋಮಗಳು ನಡೆದ್ದಿದವು. ಶ್ರೀ ಗೋಪಾಲಕೃಷ್ಣದೇವರಿಗೆ ಪಂಚಾಂಮೃತದ ಅಭಿಷೇಕ ಸಮಾರಂಭವೂ ಪ್ರಾರಂಭವಾಗಿತ್ತು. ಶ್ರೀ ಐಜೀ ಆಚಾರ್ಯರು ಇತ್ತ ಪಾಠ ಪ್ರವಚನದಲ್ಲಿ ಇದ್ದವರು ಅನಿರೀಕ್ಷಿತವಾಗಿ ಪಾಠಗಳನ್ನು ನಿಲ್ಲಿಸಿ ಪಂಚಾಮೃತದ ಅಭಿಷೇಕದ ಸೂತ್ರಗಳನ್ನು ಪಠಿಸುವಂತೆ ಶಿಷ್ಯರಿಗೆ ಹೇಳಿದರು. ಶಿಷ್ಯರು ಗುರುಗಳ ಅಪ್ಪಣೆಯಂತೆ ಆಪ್ಯಾಯಸ್ವೇತ್ಯಾದಿ ಮಂತ್ರಗಳು ಪಠಿಸಿದರು, ಅಷ್ಟರಲ್ಲಿ

ಶ್ರೀ ಅಡವೀ ಆಚಾರ್ಯರು ಶ್ರೀ ಗೋಪಾಲಕೃಷ್ಣ ದೇವರ ಬಳಿಗೆ ಬಂದು ಪಂಚಾಮೃತ ಅಭಿಷೇಕಕ್ಕಾಗಿ ಸಿದ್ಧಗೊಳಿಸಿದ್ದ ಹಾಲು ಮುಂತಾದುವುಗಳನ್ನೆಲ್ಲಾ ತಮ್ಮ ಬಿಂಬಮೂರ್ತಿಗೆ ಯೋಗಶಕ್ತಿಯಿಂದ ಸಮರ್ಪಿಸಿ ಗೋಪಾಲಕೃಷ್ಣನ ಹಿಂದುಗಡೆ ಸಮಾಧಿಗ್ರಸ್ತರಾಗಿ ಮಲಗಿ ಬಿಟ್ಟಿದ್ದರು. ಇತ್ತ ಶ್ರೀ ಐಜೀ ಆಚಾರ್ಯರು ದೇವರಿಗೆ ಪಂಚಾಮೃತವು ಮುಗಿದಿದೆ. ನಡೆಯಿರಿ. ನಾವು ಮಹಾ ಮಂಗಳಾರತಿಯನ್ನು ದೇವರಿಗೆ ಮಾಡೋಣ ಎಂದು ಶ್ರೀ ಗೋಪಾಲಕೃಷ್ಣ ದೇವರ ಸಮೀಪಕ್ಕೆ ಬಂದರು. ಅಲ್ಲಿದ್ದ ಜನರು " ಗುರುಗಳೇ ಪಂಚಾಮೃತಾಭಿಷೇಕವು ದೇವರಿಗೆ ನಡೆದಿಲ್ಲ. ಶ್ರೀ ಅಡವೀ ಆಚಾರ್ಯರು ಬಂದು ಗಟಗಟನೆ ಕುಡಿದು ಮಲಗಿರುತ್ತಾರೆಂದು ದೂರಿದರು. ಆಗ ಮಹಾನುಭಾವರಾದ ಐಜೀ ಆಚಾರ್ಯರು ಶ್ರೀ ಹರಿಯನ್ನು ಧ್ಯಾನಿಸಿದರು. ಶ್ರೀ ಗೋಪಾಲಕೃಷ್ಣನ ವದನದಿಂದ ಹಾಲು. ಮೊಸರು ಮೊದಲಾದುವುಗಳು ಧಾರಾಕಾರವಾಗಿ ಬರತೊಡಗಿದವು ಯೋಗಶಕ್ತಿಯಿಂದ ಜ್ಞಾನಿಗಳಾದ ಅಡವೀ ಆಚಾರ್ಯರು ದೇವರಿಗೆ ಸಮರ್ಪಿಸಿದ್ದೆಲ್ಲವೂ ಹೊಚ್ಚ ಹೊಸದಾಗಿ ವ್ಯಕ್ತವಾದುದನ್ನು ನೋಡಿ ಜನರೆಲ್ಲಾ ಆಶ್ಚರ್ಯ ಚಕಿತರಾದರು. ಇದೊಂದು ಪವಾಡವೇ ಎಂದು ಜನರು ಕೊಂಡಾಡಿದರು.

## ಪವಾಡ

ಶ್ರೀ ಐಜೀ ವೆಂಕಟರಾಮಾರ್ಯರು ನಿತ್ಯವೂ ತಮ್ಮ ಶಿಷ್ಯ ಪರಿವಾರ ಸಮೇತರಾಗಿ ಸಂಧ್ಯಾ ಕಾಲದಲ್ಲಿ ದೇವರ ಭಜನೆಯನ್ನು ಮಾಡು-ತ್ತಿದ್ದರು. ಕೆಲವರಿಗೆ ಈ ಭಜನೆಯಲ್ಲಿ ಉತ್ಸಾಹವಿರಲಿಲ್ಲ. ಆದರಿಂದ ದೂರ ಸರಿದರು. ಆಗ ಅವರಿಗೆಲ್ಲಾ ಆ ಭಜನೆಯ ಕಾಲದಲ್ಲಿ ಸಾಕ್ಷಾತ್ತಾಗಿ ಶ್ರೀ ಮುಖ್ಯ ಪ್ರಾಣದರ್ಶನ ಮಾಡಿಸಿ ಅವರಿಗಿದ್ದ ಅನಾದರವನ್ನು ಪರಿಹರಿಸಿದರು.

ಪ್ರತಿ ವರ್ಷದಂತೆ ಶ್ರೀ ವೆಂಕಟರಾಮಾಚಾರ್ಯರು ಶ್ರೀ ತಿರುಮಲೇಶನ ಬ್ರಹ್ಮೋತ್ಸವಕ್ಕೆಂದು ತಿರುಪತಿಗೆ ಹೋದರು. ಇವರು ಶ್ರೀ ತಿರುಮಲಾದ್ರಿ

ಯ ಮೇಲೆ ಮಲ-ಮೂತ್ರ ವಿಸರ್ಜನೆ ಮಾಡುತ್ತಿರಲಿಲ್ಲ. ಈ ನಿಯಮ ವನ್ನು ಅನೂಚಾನವಾಗಿ ಪಾಲಿಸುತ್ತಿದ್ದರು, ಅಂದು ಶ್ರೀ ವೆಂಕಟೇಶನ ಬ್ರಹ್ಮರಥೋತ್ಸವದ ದಿನ, ಅರುಣೋದಯಕ್ಕೆ ಪತ್ನೀಸಮೇತನಾಗಿ ಶ್ರೀ ವೆಂಕಟೇಶನು ದಿವ್ಯರಥಾರೂಢನಾಗಿದ್ದಾನೆ.ಸೂರ್ಯೋದಯದ ನಿರೀಕ್ಷಣೆಯಲ್ಲಿ ಭಕ್ತಾದಿಗಳು ರಥವನ್ನು ಎಳೆಯಲು ಕಾತುರರಾಗಿದ್ದಾರೆ, ಅದೇ ಕಾಲಕ್ಕೆ ವೆಂಕಟರಾಮಾರ್ಯರಿಗೆ ಮೂತ್ರಬಾಧೆಯಾಗಿದೆ. ಅವರು ಶ್ರೀ ಹರಿಯನ್ನು ಸ್ಮರಿಸುತ್ತಾ "ಎಲ್ಲಾ ನಿನ್ನ ಚಿತ್ತಾ ಸ್ವಾಮಿ, ಈ ವರ್ಷ ನಿನ್ನ ರಥೋತ್ಸವ ವನ್ನು ನೋಡುವ ಭಾಗ್ಯ ನನಗಿಲ್ಲ ಎಂದು" ಚಿಂತಿಸುತ್ತಾ ಪರ್ವತಾರೋಹಣ ಮಾಡಿ ತಮ್ಮ ಬಾಧೆಯನ್ನು ನಿವಾರಿಸಿಕೊಂಡು, ಕಪಿಲತೀರ್ಥದಲ್ಲಿ ಶುದ್ಧಿ ಸ್ನಾನ ಮಾಡಿ, ತಿರುಗಿ ಪರ್ವತಾರೋಹಣ ಮಾಡಿದರು.

ಇತ್ತ ಸೂರ್ಯೋದಯವಾಗಿದೆ. ಭಕ್ತಾಧಿಗಳು ಅಮಿತೋತ್ಸಾಹದಿಂದಿ ಶ್ರೀ ಹರಿಯ ರಥವನ್ನು ಎಳೆಯಲುದ್ಯುಕ್ತರಾಗಿದ್ದಾರೆ. ಭಕ್ತಾಧೀನನೆಂದು ಪ್ರಸಿದ್ಧನಾದ ಶ್ರೀ ಹರಿ ಮುಂದಕ್ಕೆ ಸಾಗಲಿಲ್ಲ. ಆಗ ದೇವಾಲಯದ ನಿರ್ವ ಹಣಾಧಿಕಾರಿಗಳು, ಭಕ್ತಾಧಿಗಳು ಯಾರಾದರೂ ಕಾಣಿಕೆಗಳನ್ನು ಹರಿಕೆಗಳನ್ನು ಸಲ್ಲಿಸದೇ ಇದ್ದರೇ ಅಂಥವರು ಕೂಡಲೇ ಅವುಗಳನ್ನು ಪೂರೈಸಬೇಕೆಂದು ಸೇವಕರ ದ್ವಾರಾ ಪ್ರಚಾರ ಮಾಡಿಸಿದರು.

ಆಗ ದೇವರು ಒಬ್ಬ ಬ್ರಹ್ಮಚಾರಿಯ ಮೈಲೆ ಆವಿಷ್ಟನಾಗಿ "ಐಜೀ ಆಚಾರ್ಯ ಎನ್ನುವ ಓರ್ವ ಭಕ್ತ ಬರುವವರಿಗೆ ಈ ರಥವು ಮುಂದಕ್ಕೆ ಸಾಗುವುದಿಲ್ಲ" ಎಂದು ನುಡಿದನು. ಆಗ ಅಧಿಕಾರಿಗಳು ತಮ್ಮ ಸೇವಕರನ್ನು ಕರೆಸಿ ಅವರಿಗೆ ದೇವರ ಆಜ್ಞೆಯನ್ನು ತಿಳಿಸಿ, ಆಚಾರ್ಯರನ್ನು ಕರೆತರುವಂತೆ ಆಜ್ಞಾಪಿಸಿದರು. ಅಷ್ಟರಲ್ಲಿ ಶ್ರೀ ಆಚಾರ್ಯರು ಸಪ್ತಾದ್ರಿಯ ಮೇಲೆ ಬಂದು ಶ್ರೀ ಸ್ವಾಮಿಗಳ ಪುಷ್ಕರಿಣಿಯಲ್ಲಿ ಸ್ನಾನ ಮಾಡುತ್ತಿದ್ದರು. ಸೇವಕರು ಅಲ್ಲಿಗೆ ಬಂದು ಶ್ರೀ ಐಜೀ ಆಚಾರ್ಯರು ಯಾರು? ಐಜೀ ಆಚಾರ್ಯರು ಯಾರು? ಎಂದು ಕೂಗಿಕೊಂಡು ಬರುತ್ತಿದ್ದರು. ಶ್ರೀ ಆಚಾರ್ಯರು ಅವರನ್ನು ಕರೆದು

ವಿಷಯವನ್ನು ತಿಳಿದುಕೊಂಡು ಶ್ರೀ ಹರಿಯ ರಥದ ಬಳಿಗೆ ಬಂದು ಅಧಿಕಾರ ವರ್ಗದವರಿಂದ ಮರ್ಯಾದಿತರಾಗಿ ಶ್ರೀ ಹರಿಗೆ ಮಂಗಳಾರತಿಯನ್ನು ಮಾಡಿ ಶ್ರೀ ವೆಂಕಟೇಶನನ್ನು ಈ ರೀತಿ ಸ್ತುತಿಸಿದರು, ಆಗ ಶ್ರೀಹರಿಯ ರಥವು ಮುಂದಕ್ಕೆ ಸಾಗಿತು. ಅಂದಿನಿಂದ ಐಜೀ ಆಚಾರ್ಯರೆಂದೇ ಪ್ರಸಿದ್ಧರಾದರು. ಇಂದಿಗೂ ಅವರ ವಂಶವು ಐಜೀ ಆಚಾರ್ಯರ ವಂಶವೆಂದೇ ಪ್ರಸಿದ್ಧವಾಗಿದೆ.

### ಕಾಂಬೋದಿ ರಾಗ—ಆದಿತಾಳ

ಯಾತರವ ನಾನಲ್ಲವೋ ಹರಿಬರಿದೆ ಖ್ಯಾತಿಯನು ತಂದಿತ್ತೆಯಾ
ಮಾತುಗಳು ನಾಲ್ಕಾಡಿ ಸಭೆಯೊಳಗೆ (ನಾಲುಕಾಡಿ)
ಪ್ರೀತಿಬಡಿಸುವೆನೋ ನರರಾ (ಜನರಾ)
ನೀತಿಯಲಿ ಶ್ರುತಿಸ್ಮೃತಿಗಳ ಪಠಿಸಿ ಶ್ರೀ ।
ನಾಥ ನಿನ್ನ ತೋಷಿಸಿದನೆ (ಮೆಚ್ಚಿಸಿದೆ)
ಜಪಮಣಿಗಳನು ತಿರುಗಿಸಿ ಲೋಕರನ ।
ಕಪಟಗೊಳಿಸುವೆನಲ್ಲದೆ ।
ತಪಮಾಡಿದೆ ಮನದಲ್ಲಿ ನಿನ್ನೆಯಾ ।
ಕೃಪೆಯು ಉದಯಿಸುವ ತೆರದಲಿ
ದಾಸ ವೇಷವ ಧರಿಸಿದೆ ಕನಕದಾ ।
ವಾಸನೆಯಿಂದಲ್ಲದೆ ।
ವಾಸುದೇವ ವಿಠಲಾ ಶರಣ ತಾಲೇಶವರಿಯುನು ಕರುಣಿಸೋ ॥

ಎಂದು ಸ್ತೋತ್ರ ಮಾಡಿರುತ್ತಾರೆ.

### ಪಾದುಕಾ ಮಹಿಮೆ

ಶ್ರೀ ಐಜೀ ಗ್ರಾಮವಾಸಿಗಳು ಒಂದು ಸಲ ವೇಣೀಸೋಮಪುರಕ್ಕೆ ಬಂದು ಶ್ರೀ ಐಜೀ ಆಚಾರ್ಯರನ್ನು ತಮ್ಮ ಊರಿಗೆ ಬರಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಂತೆ ಸಕಲ ಶಿಷ್ಯರ ಸಮೇತರಾಗಿ ಆಚಾರ್ಯರು

ಹೊರಡಲು ಸಿದ್ಧರಾದರು. ಮೊದಲು ತಮ್ಮ ಶಿಷ್ಯಂದಿರನ್ನೆಲ್ಲಾ ಕಳುಹಿಸಿ ದರು. ಆಮೇಲೆ ತಾವು ಕುದುರೆಯ ಮೇಲೆ ಕುಳಿತು ಹೊರಟರು. ಆಗ ವೈಶಾಖಮಾಸ ಪ್ರಚಂಡ ಸೂರ್ಯನ ತಾಪ ಬಿಸಿಲು ದಗೆಯಾಗಿತ್ತು. ದಾರಿ ಯಲ್ಲಿ ತಾಪದಿಂದ ಕಾಲು ಸುಡುತ್ತಿತ್ತು. ಇವರೊಡನೆ ಇವರ ಶಿಷ್ಯರಾದ ಅಡವೀ ಆಚಾರ್ಯರೂ ಹೊರಟರು. ಆಗ ಐಜೀ ಆಚಾರ್ಯರು ತಮ್ಮ ಪಾದುಕೆಗಳನ್ನು ಅಡವೀ ಆಚಾರ್ಯರಿಗೆ ಕೊಟ್ಟು ಇದನ್ನು ಹಾಕಿಕೊಂಡು ಬನ್ನಿರಿ. ತುಂಬಾ ಬಿಸಿಲು, ಕಾಲು ಸುಡುತ್ತಿದೆ ಎಂದು ಹೇಳಿದರು. ಗುರುಗಳ ಪರಮಾನುಗ್ರಹವೆಂದು ಅಡವೀ ಆಚಾರ್ಯರು ಆ ಎರಡೂ ಪಾದುಕೆಗಳನ್ನು ತಮ್ಮ ಹೊದೆಯುವ ವಸ್ತ್ರದಲ್ಲಿ ಭದ್ರಪಡಿಸಿ ಭಕ್ತಿಯಿಂದ ತಲೆಯ ಮೇಲಿಟ್ಟು ಕೊಂಡು ನಡೆದರು. ಬಿಸಿಲು ಬೇಗೆ ಚಂದ್ರನ ಚಂದ್ರಿಕೆ ಯಂತೆ ಇವರಿಗೆ ಭಾಸವಾಯಿತು. ಆಯಾಸವೇ ಆಗಲಿಲ್ಲ. ಆಚಾರ್ಯರು ಬೇಗ ಐಜೀ ಗ್ರಾಮಕ್ಕೆ ತೆರಳಿದರು. ತಮ್ಮ ಶಿಷ್ಯಂದಿರ ಆಗಮನವನ್ನೇ ನಿರೀಕ್ಷಿಸುತ್ತಿದ್ದರು. ದೂರದಲ್ಲಿ ಬರುತ್ತಿದ್ದ ಅಡವೀ ಆಚಾರ್ಯರನ್ನು ಕಂಡರು. ತಲೆಯ ಮೇಲೆ ಭಕ್ತಿಭಾವದಿಂದ ಪಾದುಕೆಗಳನ್ನು ಧರಿಸಿದ್ದವರನ್ನು ಕಂಡು ಸಂತೋಷಗೊಂಡು ಅವರ ಗುರುಭಕ್ತಿಗೆ ಮೆಚ್ಚಿ ನಿಮಗೂ ಸಹ ನಮ್ಮಂತೆ ಶಿಷ್ಯಪರಿವಾರವು ಅಧಿಕಾಧಿಕವಾಗಿ ಲಭಿಸಲಿ ಎಂಬ ವರವನ್ನು ಕರುಣಿಸಿದರು. ಆಗ ಅಡವೀ ಆಚಾರ್ಯರು ಗುರುವರ್ಯರೇ ತಮ್ಮ ಪಾದುಕೆ ಗಳ ಮಹಿಮೆಯಿಂದ ನನಗೆ ಬಿಸಿಲು, ಚಂದ್ರಿಕೆಯಂತೆ ತಂಪಾಗಿ ಕಂಡು ಬಂದಿ ತೆಂದು ನಡೆದ ಸಂಗತಿಯನ್ನು ಅರಿಕೆ ಮಾಡಿದರು.

## ಐಜೀ ಹಳ್ಳವು ಗರುಡ ನದಿಯಾಗಿದ್ದು

ಐಜೀ ಗ್ರಾಮದ ನೀರಿನ ಹಳ್ಳವು ಗರುಡ ನದಿಯಾಯಿತು. ಐಜೀ ಗ್ರಾಮದಲ್ಲಿ 2—3 ದಿನಗಳಿರುವಾಗಲೇ ಚಂದ್ರ ಗ್ರಹಣವು ಸಮೀಪಿ ಸಿತು. ಅಲ್ಲಿಂದ ಗ್ರಹಣ ಸ್ನಾನಕ್ಕಾಗಿ ದೂರದಲ್ಲಿದ್ದ ತುಂಗಾ ನದಿಗೆ ಹೋಗು ವಷ್ಟು ಕಾಲವೂ ಸಹ ಇರಲಿಲ್ಲ. ಆಗ ಆ ಪರಿಸರದಲ್ಲಿದ್ದ ನೀರಿನ ಹಳ್ಳಕ್ಕೆ ಶ್ರೀ ಐಜೀ ಆಚಾರ್ಯರು ಹೋಗಿ ಅಲ್ಲಿಯೇ ಗ್ರಹಣ ಸ್ನಾನವನ್ನು ಮಾಡಿ

ಗ್ರಹಣ ಕಾಲದ ತರ್ಪಣವನ್ನು ಕೊಟ್ಟರು. ಅವರ ಸ್ಪರ್ಶ ಮಾತ್ರದಿಂದಲೇ ಆ ನೀರಿನ ಹಳ್ಳವು ಒಂದು ನದಿಯಾಗಿ ಹರಿಯತೊಡಗಿತು. ಅದನ್ನು ಈಗಲೂ ಸಹ ಗರುಡನದಿ ಎಂದು ಕರೆಯುತ್ತಾರೆ.

ಕೇಶವ ಪಾದಜಾ ಗಂಗಾ ಮಾಧವೋತ್ಸಂಗ ಗಾಮಿನೀ ।
ಗಾರುಡೇತಿಚವಿಖ್ಯಾತಾ ಗೃಹಾಣಾರ್ಘ್ಯಂ ನಮೋಸ್ತುತೇ ॥ಇತಿ॥

ಎಂದು ಹೇಳಿ ಅರ್ಘ್ಯವನ್ನು ಕೊಟ್ಟಿರುತ್ತಾರೆಂದು ಹಿರಿಯರ ಹೇಳಿಕೆ ಇದೆ.

ಒಂದು ಸಲ ಶ್ರೀ ಐಜೀ ಆಚಾರ್ಯರು ಮಂತ್ರಾಲಯಕ್ಕೆ ಬಂದು ಶ್ರೀ ರಾಘವೇಂದ್ರ'ಗುರುಸಾರ್ವಭೌಮರ ಸೇವೆಯನ್ನು ಭಕ್ತಿಯಿಂದ ಮಾಡಿ ಒಳ ಪ್ರಾಕಾರದಲ್ಲಿ ಶ್ರೀ ಗುರುಗಳ ಸೂಚನೆಯಂತೆ ಶ್ರೀ ಮುಖ್ಯ ಪ್ರಾಣ ದೇವರ ಪ್ರತಿಮೆಯನ್ನು ಪ್ರತಿಷ್ಠೆಗೊಳಿಸಿ ತಮ್ಮ ಸೇವೆಯನ್ನು ಸಮರ್ಪಿಸಿ ತೆರಳಿದರು. ಶ್ರೀ ಗುರುರಾಘವೇಂದ್ರರ ಮೇಲೆ ಅನೇಕ ರೀತಿಯಲ್ಲಿ ದೇವರ ನಾಮಗಳನ್ನು ರಚಿಸಿದ್ದಾರೆ, ಭಕ್ತಿಯಿಂದ ಕೊಂಡಾಡಿದ್ದಾರೆ.

ಸಂಚಾರ ಕ್ರಮದಲ್ಲಿ ಮುಡಮಾಲ ಎಂಬ ಗ್ರಾಮಕ್ಕೆ ಬಂದರು. ಅಂದಿನ ದಿನದಲ್ಲಿ ಶ್ರೀ ಐಜೀ ಆಚಾರ್ಯರ ಕೀರ್ತಿಯು ಮನೆಮಾತಾಗಿದ್ದಿತು ಪ್ರಖ್ಯಾತರಾಗಿದ್ದ ಪವಾಡಪುರುಷರೆಂದೇ ಪ್ರಸಿದ್ಧರಾಗಿದ್ದ ಆಚಾರ್ಯರು. ಬಂದುದಕ್ಕೆ ಸಂತೋಷಗೊಂಡ ಅಲ್ಲಿನ ದೇಸಾಯಿಯವರು ಆದರದಿಂದ ಶ್ರೀ ಆಚಾರ್ಯರಿಗೆ ಸತ್ಕಾರವನ್ನು ಮಾಡಿದರು. ಅಂದಿನ ದಿನ ವೈಭವದ ದೇವರ ಪೂಜೆಯು ದೇಸಾಯಿಯವರ ಮನೆಯಲ್ಲಿ ನಡೆಯಿತು. ತೀರ್ಥ-ವನ್ನು ಸ್ವೀಕರಿಸಿದ ಮೇಲೆ ಎಲ್ಲರಿಗೂ ಭೋಜನಕ್ಕಾಗಿ ಎಲೆಯನ್ನು ಹಾಕಲಾಯಿತು. ಶ್ರೀ ಐಜೀ ಆಚಾರ್ಯರು ಮತ್ತು ಅವರ ಶಿಷ್ಯ ಪರಿವಾರ ದವರೆಲ್ಲರೂ ಭೋಜನಕ್ಕೆ ಕುಳಿತರು. ಕೃಷ್ಣಾರ್ಪಣೆಯನ್ನು ದೇಸಾಯಿ ಯವರು ಹೇಳಿ ಸರಿದರು. ಭೋಜನಕ್ಕೆ ಕೂಡಲಿಲ್ಲ. ಇದನ್ನು ಗಮನಿಸಿದ ಆಚಾರ್ಯರು, ದೇಸಾಯಿಯವರು ಊಟಕ್ಕೆ ಕೂಡದಿರಲು ಕಾರಣವೇನೆಂದು ಕೇಳಿದರು. ಆಗ ದೇಸಾಯಿಯವರು ಗುರುವರ್ಯರೇ ! ನನಗೆ ಪರಿಣಾಮ

ಶೂಲೆಯ ಬಾಧೆ ಇದೆ. ಊಟವನ್ನೇ ಬಿಟ್ಟಿದ್ದೇನೆ. ಬಹಳ ವರ್ಷಗಳಿಂದ ಈ ರೋಗದಿಂದ ಬಳಲಿದ್ದೇನೆ. ತಾವು ಮಹಾನುಭಾವರು, ದಯಮಾಡಿ ನನ್ನ ಈ ಕಷ್ಟವನ್ನು ಪರಿಹರಿಸಬೇಕೆಂದು ಕೈಮುಗಿದು ನಮಸ್ಕರಿಸಿ ಬೇಡಿ ಕೊಂಡನು. ಆಗ ಐಜೀ ಆಚಾರ್ಯರು ನೀರನ್ನು ಅಭಿಮಂತ್ರಿಸಿ ಅವರಿಗೆ ಕುಡಿಯಲು ಕೊಟ್ಟರು. ಆ ಅಭಿಮಂತ್ರಿಸಿದ ಜಲವನ್ನು ಪಾನಮಾಡಿದ ಕೂಡಲೇ ಉದರಬಾಧೆಯು ಕಡಿಮೆಯಾಯಿತು. ಆಗ ದೇಸಾಯಿಯವರು ಇತರರಂತೆ ಊಟ ಮಾಡಿದರು. ಇದರಿಂದ ಸಂತೋಷಗೊಂಡ ದೇಸಾಯಿ ಯವರು "ಕೊತ್ತಪಲ್ಲಿ" ಎಂಬ ತಮ್ಮದೊಂದು ಗ್ರಾಮವನ್ನು ಆಚಾರ್ಯರಿಗೆ ದಾನವಾಗಿ ಕೊಟ್ಟನು. ಅದು ಆ ವಂಶದವರ ಅಧೀನದಲ್ಲಿ ಅನೇಕ ವರ್ಷ ಗಳವರೆವಿಗೆ ಇತ್ತು. ಇದೇ ರೀತಿ ಅನೇಕ ಭಕ್ತರೇ, ಮಾಂಡಲೀಕರು ಪವಾಡ ಪುರುಷರಾದ ಐಜೀ ಆಚಾರ್ಯರಿಗೆ (1) ರ್ಶೋಲಾಪುರ ಎಂಬ ಗ್ರಾಮ ವನ್ನೂ (2) ಮಲ್ಲನಹಟ್ಟಿ ಎಂಬ ಚಿಕ್ಕ ಗ್ರಾಮವನ್ನೂ (3) ಸರದಾರ ಪುರವೆಂಬುದನ್ನೂ (4) ಶಂಕರಬಂಡಿ ಎಂಬ ಗ್ರಾಮವನ್ನು (5) ಮಾಲೆ ಸೋಮಪುರ ಎಂಬ ಗ್ರಾಮವನ್ನು ದಾನವಾಗಿ ಕೊಟ್ಟಿರುವುದಕ್ಕೆ ಸನ್ನದು ಗಳು ದಾಖಲೆಗಳು ಈಗಲೂ ಇರುತ್ತವೆ.

## ಪವಾಡ

ಒಂದಾವರ್ತಿ ಮಾನವಿ ತಾಲ್ಲೂಕಿನ ಖರಾಬದಿನ್ನಿ, ಈರಲಗಡ್ಡಿ ಎಂಬ ಗ್ರಾಮಗಳ ಮಧ್ಯದಲ್ಲಿರುವ ಹೊಲದ ಜಮೀನಿನ ಮೇಲೆ ಐಜೀ ಆಚಾರ್ಯರು ಹೋಗುತ್ತಿರುವಾಗ ಅವರಿಗೆ ಹಿಂದಿನ ಜನ್ಮದ ಸ್ಮರಣೆಯು ಬಂದಿದೆ. ಹಿಂದೆ ಅವರು ಅಲ್ಲಿ ಒಂದು ಯಜ್ಞವನ್ನು ನಡೆಸಿದ್ದರಂತೆ, ಆಗ್ಲೆ ಅದು ಜ್ಞಾಪಕಕ್ಕೆ ಬಂದು, ಆ ಯಜ್ಞವನ್ನು ಆಚರಿಸಿದ ಜಾಗದಲ್ಲಿ ಒಂದು ಕಟ್ಟೆಯನ್ನು ಕಟ್ಟಿ ಸಿದರು. ಇಂದಿಗೂ ಆ ಕಟ್ಟೆ ಇದೆ. ಆ ಕಟ್ಟೆಯ ಮೇಲೆ ದೇವರ ಪೂಜಾದಿ ಗಳನ್ನು ನೆರವೇರಿಸಿದರು. ಆ ಕಟ್ಟೆಯಲ್ಲಿ ಒಂದು ವಿಶೇಷ ಸನ್ನಿಧಾನವನ್ನು ಉಂಟುಮಾಡಿದ್ದಾರೆ. ಸರ್ಪ ಕಚ್ಚಿದವರು ಆ ಕಟ್ಟೆಗೆ ಮೂರುಸಲ ಪ್ರದಕ್ಷಿಣೆ ಮಾಡಿದರೆ ಇಂದಿಗೂ ಸರ್ಪ ಬಾಧೆಯು ಪರಿಹಾರವಾಗುತ್ತದೆ. ಈಗಲೂ ಆ ಜಮೀನು ಆ ವಂಶದವರ ವಶದಲ್ಲಿದೆ.

## ಮತ್ತೊಂದು ಪವಾಡ

ಒಂದಾವರ್ತಿ ಶ್ರೀ ಐಜೀ ಆಚಾರ್ಯರು ತಿರುಪತಿಗೆ ಶ್ರೀನಿವಾಸನ ದರ್ಶನಕ್ಕಾಗಿ ಹೋಗಿದ್ದಾಗ. ಶ್ರೀನಿವಾಸನ ದಿವ್ಯದರ್ಶನ ಪಡೆದು-ಇನ್ನೇನು ಹಿಂದಿರುಗಬೇಕೆನ್ನುವಷ್ಟರಲ್ಲಿ ಅಲ್ಲಿನ ಜನರು ಇವರ ಪ್ರಭಾವವನ್ನು ಅರಿತವರು ಬಂದು, ಸ್ವಾಮಿ, ಈ ಪರಿಸರದಲ್ಲಿ ಮಾರಿಕಾ ಉಪದ್ರವವು ಬಹಳವಾಗಿದೆ, ಇದನ್ನು ತಾವು ಪರಿಹರಿಸಬೇಕೆಂದು ಪ್ರಾರ್ಥಿಸಿದರು. ಆಗ ಐಜೀ ಆಚಾರ್ಯರು ದುರ್ಗಾದೇವಿಯನ್ನು ಭಕ್ತಿಯಿಂದ ಪ್ರಾರ್ಥಿಸಿ ಆ ಉಪದ್ರವವನ್ನು ಪರಿಹರಿಸಿದ ಸಮಯದಲ್ಲಿ ಅವರು ಮಾಡಿರುವ ದುರ್ಗಾ ದೇವಿಯ ಸ್ತೋತ್ರವು ಈ ಕೆಳಕಂಡತೆ ಇದೆ.

ಅಂಜಿಸುವದ್ಯಾಕಮ್ಮ ಕಂಜೋದ್ಭವ ನಮ್ಮ ನೀ ।
ಅಂಜಿಸಿದರೆ ಲೋಕ ಅಂಜಾದಿರುವದೆ ॥ ಪಲ್ಲ ॥
ಕುಂಜರ ಗಮನೇ ನಾವಂಜನ ದೇವಿ ।
ಸಂಜಾತನಾದ ಪ್ರಭಂಜನನನುಗರು ॥
ಕಂಜಾನಾಭನ ಪಾದ ಕಂಜಾಕ್ಕೆ ವಿಮುಖಿ ।
ಸಂಜಿಲಿ ಚರಿಸುವ ಪುಂಜರು ಕಡಿಮೆ ॥ ೧ ॥

ನಿನ್ನಾನೆ ನಂಬಿ ನಾವಿನ್ನು ಸಂಸ್ಕೃತಿಯಾ ।
ಬನ್ನಾವೆ ಕಳಕೊಂಡು ಚನ್ನಾಗಿ ಜಗದಿ ॥
ಧನ್ನ್ಯಾರದೇವೆಂದು ಮನ್ನಾದಿ ಬಯಸೆ ।
ಅನ್ಯಾರಂದದಲೆ ನೀ ನಮ್ಮನ್ನ ನೋಡುವರೆ ॥ ೨ ॥

ಸಿರಿ ನಾರಸಿಂಹನ್ನ ವರ ಭಕ್ತಿಯಲಿ ನೀವು ।
ಕರವಶ ಮಾಡಿಪ್ಪೆ ಪರವೇನೆ ನಿನಗೆ ॥
ಪರಮೇಷ್ಠಿ ಮೊದಲಾದಾಮರರಾ ನೀ ಪೊರವೆ ।
ಸಿರಿ ವಾಸುದೇವ ವಿಠಲನ್ನ ತೋರಮ್ಮ ॥ ೩ ॥

ಅಮ್ಮಾ ಅವ್ವೊಮ್ಮ ದುರ್ಗಮ್ಮ ಕಮ್ಮಾ ।
ನಿಮ್ಮ ಮಹಾ ಮಹಿಮೆಯನು ಸುಮ್ಮಗೆ ನಮ್ಮಾ ॥

ಇತ್ಯಾದಿಯಾಗಿ ಭಕ್ತಿರಸಭರಿತವಾಗಿ ಪ್ರಾರ್ಥಿಸಿ ಮಾರಿಕಾ ಉಪದ್ರವ ವನ್ನು ಪರಿಹಾರಮಾಡಿದರು.

## ಮತ್ತೊಂದು ವಿಚಿತ್ರ ಘಟನೆ :

### ಶ್ರೀ ಕೃಷ್ಣ ಪರಮಾತ್ಮನು ಗೋವುಗಳ ಸಹಿತನಾಗಿ ಕಾಣಿಸಿದುದು.

ಒಂದು ದಿನ ಶ್ರೀಯುತ ಐಜೀ ಆಚಾರ್ಯರು ಶ್ರೀ ಮನ್ನ್ಯಾಯ ಸುಧಾ ಗ್ರಂಥವನ್ನು ಶಿಷ್ಯ ವರ್ಗಕ್ಕೆ ಪಾಠ ಹೇಳುತ್ತಿದ್ದಾರೆ. ಒಂದು ಪ್ರಮೇಯವನ್ನು ನಿರೂಪಿಸುತ್ತಿರುವಾಗ ಹಾಗೆಯೇ ಇವರ ಮನಸ್ಸು ಪರಮಾತ್ಮನ ಧ್ಯಾನಾಸಕ್ತವಾಗಿದೆ ಕಣ್ಣು ಮುಚ್ಚಿದ್ದಾರೆ. ಅಸಂಪ್ರಜ್ಞಾತ ಸಮಾಧಿಸ್ಥರಾದರು. ಇವರ ಭಕ್ತಿ ಭಾವಕ್ಕೆ ಮೆಚ್ಚಿದ ಶ್ರೀ ಕೃಷ್ಣ ಪರಮಾತ್ಮನು ಗೋವುಗಳ ಗುಂಪಿನಿಂದ ಕೂಡಿ ಇವರಿಗೆ ಕಾಣಿಸಿಕೊಂಡನು. ಅವರೊಡನೆ ಬಂದಿದ್ದ ಹಸುಗಳು ಸೆಗಣಿ ಹಾಕಿದವು. ಕೆಲವು ಶಿಷ್ಯಂದಿರು ಪುಸ್ತಕಗಳನ್ನು ಮುಚ್ಚಿದ್ದರು, ಕೆಲವರು ತೆಗೆದಿದ್ದರು, ಪುಸ್ತಕಗಳನ್ನು ಮುಚ್ಚಿದ್ದ ಶಿಷ್ಯಂದಿರ ಪುಸ್ತಕಗಳ ಮೇಲೆ ಅಲ್ಲಲ್ಲಿ ಹಸುಗಳ ಸೆಗಣಿಯು ಕಾಣಿಸಿಕೊಂಡವು. ಹತ್ತಿರವಿದ್ದವರಿಗೆಲ್ಲಾ ಆಶ್ಚರ್ಯವಾಯಿತು. ಪುಸ್ತಕಗಳನ್ನು ಮುಚ್ಚಿದ್ದವರೆಲ್ಲಾ ಇಂದಿಗೆ ನಿಮ್ಮ ಪಾಠವು ಮುಗಿದಿದೆ ಎಂದು ಹೇಳಿದರು. ದಾಸಪ್ಪನವರು ಇದನ್ನೆಲ್ಲಾ ಗಮನಿಸುತ್ತಿದ್ದರು. ಆಚಾರ್ಯರಿಗೆ ಎಚ್ಚರಿಕೆಯಾಯಿತು. ಶಿಷ್ಯರನ್ನು ಎಂದಿನಂತೆ ಪಾಠಕ್ಕೆ ಕರೆದರು. ಪುಸ್ತಕಗಳನ್ನು ತೆರೆದಿದ್ದು ಎಲ್ಲರೂ ತಮ್ಮ ತಮ್ಮ ಪುಸ್ತಕಗಳ ಸಹಿತ ಪಾಠಕ್ಕೆ ಕುಳಿತರು. ಆಗ ಶ್ರೀ ಐಜೀ ಆಚಾರ್ಯರು ಶ್ರೀ ಕೃಷ್ಣನ ಸಾಕ್ಷಾತ್ಕಾರದ ಸವಿನೆನಪಿಗಾಗಿ ಈ ಕೆಳಗೆ ಕಂಡಂತೆ ಶ್ರೀ ಕೃಷ್ಣನನ್ನು ಸ್ತೋತ್ರ ಮಾಡಿದ್ದಾರೆ.

ಆದಿತಾಳ

ಬಂದಾಕೃಷ್ಣಾ ಛಂದದಿಂದ ಬಂದನೋಡೇ ಗೋಪಾ ।
ವೃಂದದಿಂದ ನಂದಿಸುತ ಬಂದನೋಡೇ ಪಲ್ಲವಿ
ಗೋಪಾಮೋವ ನೀವ ದೇವ ಬಂದ ನೋಡೇ ॥ ೧ ॥

ದೇವತಾವಾದ್ಯಗಳಿಂಧ ಬಂಧನೋಡೇ ।
ಪಾಪ ಪ್ರೋಪ ಗೋಪ ರೂಪ ಬಂದ ನೋಡೇ ।
ತಾಪಾ ಲೋಪಾ ಲಾಪಾ ಟೋಪ್ಪ ಬಂದ ನೋಡೇ ॥ ೨ ॥

ಭೂಸುರ ಸುಖ ಸೂಸುತ ಬಂದ ನೋಡೇ
ವಾಸುದೇವ ವಿಠಲ ತಾ ಬಂದ ನೋಡೇ ॥ ೩ ॥

## ಮತ್ತೊಂದು ಮಹಿಮಾ ಪ್ರದರ್ಶನ

ಹಂಪೆಯಲ್ಲಿ ಪ್ರತಿವರ್ಷದಂತೆ ಬೃಹತ್ರಥೋತ್ಸವವು ನಡೆಯುತ್ತಿತ್ತು ಆಗ ಅನಿರೀಕ್ಷಿತವಾಗಿ ರಥಕ್ಕೆ ಬೆಂಕಿಬಿದ್ದಿತು. ರಥವು ಉರಿಯತೊಡಗಿತು ಯಾರೋ ಮಹಾತ್ಮರು ಬಂದು ಜನರ ದೃಷ್ಟಿಗೆ ಗೋಚರವಾಗುವಂತೆ ನೀರನ್ನೆರಚಿ ಉರಿಯನ್ನು ಆರಿಸಿದರು. ಇದು ಅಲ್ಲಿ ನಡೆದ ಘಟನೆ.

ಯಾವ ದಿನ ರಥಕ್ಕೆ ಬೆಂಕಿಯು ಯಾವ ಮದ್ಯಾಹ್ನದಲ್ಲಿ ಹತ್ತಿ ಕೊಂಡಿತೋ ಅದೇ ಸಮಯದಲ್ಲಿ ಶ್ರೀಯುತ ಐಜೀ ಆಚಾರ್ಯರು ಶಿಷ್ಯ ವೃಂದಕ್ಕೆ ನ್ಯಾಯ ಸುಧಾ ಪಾಠವನ್ನು ಹೇಳುತ್ತಿದ್ದವರು ಅನಿರೀಕ್ಷಿತವಾಗಿ ಎದ್ದು ನೀರಿನ ಪಾತ್ರೆಯಿಂದ ನೀರನ್ನು ಮೇಲೆ ಮೇಲಕ್ಕೆ ಉಗ್ಗಿದರು, ಸುಮಾರು ಹೊತ್ತು ನೀರನ್ನು ಉಗ್ಗಿದ ಮೇಲೆ ಪುನಃ ಪಾಠಕ್ಕೆ ಬಂದು ಕುಳಿತರು. ಆಗ ಶಿಷ್ಯರು ಗಾಬರಿಗೊಂಡು ಆಶ್ಚರ್ಯದಿಂದ ಆಚಾರ್ಯ ರನ್ನು ಪ್ರಶ್ನೆ ಮಾಡಿದರು. ಅದಕ್ಕೆ ಅವರು ಹಂಪೆಯಲ್ಲಿ ರಥಕ್ಕೆ ಬೆಂಕಿ ಹತ್ತಿತ್ತು. ಅದನ್ನು ಆರಿಸಿದ್ದಾಯಿತು ಎಂದು ಉತ್ತರವಿತ್ತರು. ಇದನ್ನು

ಕೇಳಿ ಅಲ್ಲಿನ ಜನರಿಗೆಲ್ಲಾ ತುಂಬಾ ಆಶ್ಚರ್ಯವಾಯಿತು. ಇದಾದ ಕೆಲವು ದಿನಗಳು ಕಳೆದ ಮೇಲೆ ಹಂಪೆಯ ಉತ್ಸವಕ್ಕೆ ಹೋಗಿದ್ದ ಕೆಲವು ಜನರು ವೇಣಿ ಸೋಮಪ್ಪುರಕ್ಕೆ ಬಂದು ಹಂಪೆಯಲ್ಲಿ ಆದ ಘಟನೆಯನ್ನು ಕಣ್ಣಾರೆ ಕಂಡಿದ್ದನ್ನು ಎಲ್ಲರಿಗೂ ಹೇಳಿದರು. ನಿಮ್ಮ ಆಚಾರ್ಯರೇ ಬಂದಿದ್ದರು. ಬೆಂಕಿಯನ್ನು ಆರಿಸಿದರು ಎಂದಾಗ ಎಲ್ಲರೂ ಆಶ್ಚರ್ಯ ಪಟ್ಟರು. ಯೋಗಿ ವರೇಣ್ಯರಾದ ಶ್ರೀ ಐಜೀ ಆಚಾರ್ಯರ ದಿವ್ಯ ವ್ಯಾಪಾರವು ಅಮಾನುಷ ವ್ಯಾಪಾರವು ಅಂದಿನ ದಿನಗಳಲ್ಲಿ ಎಲ್ಲರಿಗೂ ಮನೆ ಮಾತಾಗಿದ್ದಿತು.

## ಮತ್ತೊಂದು ಮಹಿಮೆ

### ಪೂನಾ ನಗರದಲ್ಲಿ ನಡೆದ ವಿದ್ವತ್ಸಭೆಯ ವಿಚಾರ

ಅಂದಿನ ಸಮಯದಲ್ಲಿ ಪ್ರಭುಣೆ ರಾಮಾಶಾಸ್ತ್ರಿಗಳೆಂಬುವವರು ಪ್ರಚಂಡ ಪಂಡಿತರಿದ್ದರು. ಇವರಿಗೂ ಶ್ರೀ ವರದೇಂದ್ರ ಶ್ರೀ ಶ್ರೀಗಳೀವರಿಗೂ ವೇದಾಂತಶಾಸ್ತ್ರದಲ್ಲಿ ವಾಕ್ಯಾರ್ಥವು ನಡೆಯಿತು. ಆಗ ಶ್ರೀ ಧೀರೇಂದ್ರ ತೀರ್ಥ ತಮ್ಮ ಪೂರ್ವಾಶ್ರಮದಲ್ಲಿ ಶ್ರೀ ವರದೇದ್ರರ ಸಮೀಪದಲ್ಲಿದ್ದರು. ವೇದಾಂತಶಾಸ್ತ್ರದ ವಾಕ್ಯಾರ್ಥದಲ್ಲಿ ಇವರೂ ಪ್ರಮುಖ ಭಾಗವಹಿಸಿದ್ದರು. ವಾಕ್ಯಾರ್ಥದಲ್ಲಿ ಪರಾಜಿತರಾದ ಪ್ರಭುಣೆ ರಾಮಾಶಾಸ್ತ್ರಿಗಳು ತಮ್ಮ ನಿವಾಸದ ಮನೆಯನ್ನೇ ಶ್ರೀ ವರದೇಂದ್ರಸ್ವಾಮಿಗಳಿಗೆ ದಾನ ಮಾಡಿದರು. ಅದೇ ಈಗ ಪೂನಾನಗರದಲ್ಲಿ ಶ್ರೀ ವರದೇಂದ್ರತೀರ್ಥರ ಶ್ರೀಮಠವಾಗಿ ಕಂಗೊಳಿಸುತ್ತಲಿದೆ.

"ಈ ರಾಮನ ಮನೆ ಆ ರಾಮನಿಗಾಯಿತು" ಎಂದು ಉದ್ಗಾರ ಮಾಡಿದರೆಂದು ಅವರ ಚರಿತ್ರೆಯಲ್ಲಿ ಉಲ್ಲಂಖಿತವಾಗಿದೆ.

ಆ ಘನ ವಿದ್ವಾಂಸರಾದ ಪ್ರಭುಣೆ ರಾಮಾಶಾಸ್ತ್ರಿಗಳು ಪ್ರತಿವರ್ಷವೂ ಪೂನಾದಲ್ಲಿ ವಿದ್ವತ್ಸಭೆಯನ್ನು ನಡೆಸುತ್ತಿದ್ದರು. ಆ ಸಭೆಗೆ ಬರುವಂತೆ ಶ್ರೀ

ಐಜೀ ಆಚಾರ್ಯರಿಗೂ ಆಹ್ವಾನವೂ ಬಂತು. ಆಗಾಗಲೇ ಐಜೀ ಆಚಾರ್ಯರಿಗೆ 70 ವರ್ಷವಾಗಿತ್ತು. ವಯೋವೃದ್ಧರಾದ ಆಚಾರ್ಯರು ತಮ್ಮ ಶಿಷ್ಯಂದಿರನ್ನು ಪೂನಾಕ್ಕೆ ಕಳುಹಿಸಿದರು. ಅಲ್ಲಿ ನಡೆಧ ವಿದ್ವತ್ಸಭೆಯಲ್ಲಿ 4 ಜನ ಆಚಾರ್ಯರ ಶಿಷ್ಯಂದಿರು ಪ್ರತ್ಯೇಕ ಪ್ರತ್ಯೇಕವಾಗಿ ನಾಲ್ಕು ಶಾಸ್ತ್ರಗಳಲ್ಲಿ ವಾಕ್ಯಾರ್ಥಗಳನ್ನು ಅದ್ಭುತವಾಗಿ ಹೇಳಿ ಎಲ್ಲರ ಪ್ರಶಂಸೆಗೆ ಪಾತ್ರರಾದರು, ಆಗ ಪ್ರಭುಣೆಯವರು "ಏಕಸ್ಮಿನ್ ಜಸ್ಮನಿ ಏಕಮೇವಶಾಸ್ತ್ರಂ" ಎಂದು ಪ್ರಸಿದ್ಧಿಯಿದೆ. ಒಂದು ಶಾಸ್ತ್ರದಲ್ಲಿ ಪ್ರಾವೀಣ್ಯತೆಯನ್ನು ಮಾನವನು ಒಂದು ಜನ್ಮದಲ್ಲಿ ಗಳಿಸುವುದು ಕಷ್ಟಸಾಧ್ಯ. ಹೀಗಿರುವಲ್ಲಿ ಈ ನಾಲ್ಕು ಶಾಸ್ತ್ರಗಳಲ್ಲಿ ಪಾರಂಗತರಾದ ಈ ನಾಲ್ಕು ಜನ ಶಿಷ್ಯರಿಗೆ ಗುರುಗಳಾಗಿರುವ ಮಹಾನುಭಾವರು ಎಂತಹ ಮಹಾತ್ಮರೋ ಎಂದು ಶ್ರೀ ಐಜಿ ಆಚಾರ್ಯರ ಗುಣವನ್ನು ಪ್ರಶಂಶಿಸಿ, ಆ ನಾಲ್ಕೂ ಜನರಿಗೂ ಉತ್ತಮವಾದ ಸಭಾ ಸಂಭಾವನೆಗಳನ್ನು ಕೊಟ್ಟು ಅವರ ಗುರುಗಳಿಗೂ ಪ್ರತ್ಯೇಕವಾಗಿ ಮರ್ಯಾದೆಯ ರೂಪವಾಗಿ ಸಂಭಾವನೆಯನ್ನು ಕಳುಹಿಸಿವರು, ವಿದ್ವತ್ಸಭೆಯಲ್ಲಿ ಸನ್ಮಾನಿತರಾದ ಶಿಷ್ಯರು ಬಂದು ಗುರುಗಳಿಗೆ ನಮಸ್ಕರಿಸಿ ನಡೆದುದ್ದನ್ನೆಲ್ಲಾ ಅರಿಕೆ ಮಾಡಿದರು.

### ಆರಣಿ ಸಂಸ್ಥಾನವಲ್ಲಿ ನಡೆದ ವಿದ್ವತ್ಸಭೆಯ ವಿಚಾರ

ಪ್ರತಿ ವರ್ಷವೂ ಪೂನಾನಗರದಲ್ಲಿ ನಡೆಯುತ್ತಿದ್ದಂತೆ, ಆರಣಿ ಸಂಸ್ಥಾನದಲ್ಲೂ ವಿದ್ವತ್ಸಭೆಯು ನಡೆಯುತ್ತಿತ್ತು, ಒಂದು ಸಲ ಆ ಸಭೆಗೆ ಬರಬೇಕೆಂದು ಶ್ರೀ ಐಜೀ ಆಚಾರ್ಯರಿಗೂ ಆಹ್ವಾನ ಬಂತು. ಆದರೆ ಅಲ್ಲಿಗೆ ಹೋಗಿಬರುವಷ್ಟು ಆಚಾರ್ಯರಿಗೆ ದೇಹಾರೋಗ್ಯವಿರಲಿಲ್ಲ ವೃದ್ಧರಾಗಿದ್ದರು. ಆದ್ದರಿಂದ ತಮ್ಮ ಶಿಷ್ಯಂದಿರಿಗೆ ಅಲ್ಲಿ ಭಾಗವಹಿಸುವಂತೆ ಹೇಳಿ ಮಂತ್ರಿಸಿದ ಮಂತ್ರಾಕ್ಷತೆಗಳನ್ನು ಕೊಟ್ಟು ಕಳುಹಿಸುವಾಗ ಈ ರೀತಿ ಆಜ್ಞೆ ಮಾಡಿದರು. ನೀವು ಆರಣಿ ವಿದ್ವತ್ತಿಗೆ ಹೋಗಿ ಬನ್ನಿ. ನಿಮಗೆ ಅಲ್ಲಿನ ವಾಕ್ಯಾರ್ಥದಲ್ಲಿ ವಿಜಯವು ಲಭಿಸುತ್ತದೆ. ಸನ್ಮಾನಿತರಾಗಿ ನೀವು ಬರುವಾಗ ಅಲ್ಲಿ ಒಂದು ಜಾಗದಲ್ಲಿ ಬೊರಲು ಹಾಕಿರುವ ಒಂದು ನಗಾರಿಯು ಇರುತ್ತದೆ ಅದನ್ನು ತೆಗೆದುಕೊಂಡು ಬನ್ನಿರಿ. ಮರೆಯ ಬೇಡಿ ಎಂದು ಹೇಳಿ ಕಳುಹಿಸಿ

ದರು. ಗುರುಗಳ ಮಾತಿನಂತೆಯೇ ಎಲ್ಲವೂ ನಡೆಯಿತು. ನಗಾರಿಯೊಡನೆ ಬಂದ ಶಿಷ್ಯಂದಿರು ತಮ್ಮ ಜಯಪತ್ರಿಕೆಯನ್ನು ಗುರುಗಳಿಗೆ ಅರ್ಪಿಸಿ ಅವರ ಆಶೀರ್ವಾದವನ್ನು ಪಡೆದರು.

## ಅಮಾನುಷವಾದ ಮತ್ತೊಂದು ವಿಚಿತ್ರವಾದ ಘಟನೆ

ಐಜೀ ವಂಶದವರಲ್ಲಿ ಹಿರಿಯರಾದವರು ಹಿಂದೆ ರಾಯಚೂರಿಗೆ ಸೇರಿದ ದಿನ್ನಿ ಗ್ರಾಮದವರೆಂದು ಹಿಂದೆಯೇ ತಿಳಿಸಿದ್ದೇವೆ.

ಶ್ರೀಯುತ ಐಜೀ ಆಚಾರ್ಯರ ಕೀರ್ತಿಯು ಎಲ್ಲೆಲ್ಲೂ ಪ್ರಸಾರ ವಾಗಿತ್ತು. ಅಮಾನುಷಗಳಾದ ಪವಾಡ ಪುರುಷರೆಂದು ಜನರು ಆಡಿಕೊಳ್ಳು ತ್ತಿದ್ದರು. ಇದನ್ನು ಕೇಳಿದ ದಿನ್ನಿ ಗ್ರಾಮದವರು ತಮ್ಮ ಗ್ರಾಮಕ್ಕೆ ಬಂದು ಆತಿಥ್ಯವನ್ನು ಸ್ವೀಕರಿಸಬೇಕೆಂದು ವೇಣೀ ಸೋಮಪುರಕ್ಕೆ ಬಂದು ಶ್ರೀಯುತ ಆಚಾರ್ಯರಲ್ಲಿ ಪ್ರಾರ್ಥಿಸಿದರು. ಅವರ ಪ್ರಾರ್ಥನೆಗೆ ಒಪ್ಪಿ ಐಜೀ ಆಚಾರ್ಯರು ಸಕಲ ಶಿಷ್ಯ ಪರಿವಾರ ಸಮೇತರಾಗಿ ದಿನ್ನಿ ಗ್ರಾಮಕ್ಕೆ ಹೋದರು. ಅಂದಿನ ದಿನಗಳಲ್ಲಿ ಜನರು ಸಾಮಾನುಗಳನ್ನು ಸಾಗಿಸಲು ಮತ್ತು ಓಡಾಡಲು ಹೆಚ್ಚಾಗಿ ಕುದುರೆಗಳನ್ನು ಉಪಯೋಗಿಸುತ್ತಿದ್ದರು. ಅದರಂತೆ ಐಜೀ ಆಚಾರ್ಯರ ಪರಿವಾರದವರು ಸುಮಾರು ಹದಿನೈದು ಕುದುರೆಗಳೊಡನೆ ದಿನ್ನಿ ಗ್ರಾಮಕ್ಕೆ ಬಂದರು. ಅಲ್ಲಿ ಜನರು ವಿಶೇಷಾಕಾರ ವಾಗಿ ನಾಲ್ಕಾರು ದಿನಗಳು ಇವರಿಗೆ ಆತಿಥ್ಯವನ್ನು ಬಹು ಭಕ್ತಿಯಿಂದ ವೈಭ ವದಿಂದ ನಡೆಸಿದರು. ಅದಾದನಂತರ ಆ ಗ್ರಾಮದಿಂದ ಹಿಂದಿರುಗಿ ಪುನಃ ವೇಣೀ ಸೋಮಪುರಕ್ಕೆ ಬರುವಾಗ ದಾರಿಯಲ್ಲಿ ಒಂದು ನೀರಿನ ಕೊಳವು ಸಿಕ್ಕಿತು. ಆಗ ಶಿಷ್ಯಂದಿರು ಕುದುರೆಗಳಿಂದ ಇಳಿದು ದೇಹ ಬಾಧೆಗಳನ್ನು ತೀರಿಸಿಕೊಂಡು, ನೀರನ್ನು ಕುಡಿದು ಸ್ವಲ್ಪ ಕಾಲ ಮರದ ನೆರಳಿನಲ್ಲಿ ಸುಧಾ ರಿಸಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಇವರ ಕುದುರೆಗಳು ಪಕ್ಕದಲ್ಲಿದ್ದ ಕಡಲೇ ಗಿಡಗಳಿಂದ ಕೂಡಿದ್ದ ಹೊಲಕ್ಕೆ ನುಗ್ಗಿ ಆ ಗಿಡಗಳನ್ನೆಲ್ಲಾ ತಿಂದು ಬಿಟ್ಟವು.

ಆಗ ಆ ಹೊಲದ ಯಜಮಾನನು ಕೋಪೋದ್ರೇಕದಿಂದ ಅಲ್ಲಿ ತಂಗಿದ್ದ ಐಜಿ ಆಚಾರ್ಯರ ಶಿಷ್ಯಂದಿರನ್ನು ತುಚ್ಛ ಭಾಷೆಯಲ್ಲಿ ದೂಷಿಸಲಾರಂಭಿಸಿದನು. ಆ ಸಮಯಕ್ಕೆ ಸರಿಯಾಗಿ ಶ್ರೀ ಐಜೀ ಆಚಾರ್ಯರೂ ಸಹ ಆ ಜಾಗಕ್ಕೆ ಬಂದು ಏನು ಸಮಾಚಾರವೆಂದು ವಿಚಾರಿಸಿದರು. ಆಗ ಆ ಹೊಲದ ಯಜಮಾನನು "ಏನೋ ಎಲೈ ಹಾರುವಾ" ನಿನ್ನ ಪರಿವಾರದ ಕುದುರೆಗಳು ನನ್ನ ಕಡಲೇ ಗಿಡಗಳನ್ನೆಲ್ಲಾ ತಿಂದಿದೆ "ಇತ್ಯಾದಿಯಾಗಿ ಏಕವಚನದಲ್ಲಿ ಸಂಭೋಧಿಸಿ ಮಾತನಾಡಿದನು .ಅವನ ಮಾತನ್ನು ಕೇಳಿದಕ್ಷಣದಲ್ಲಿ ಶ್ರೀಯುತ ಐಜಿ ಆಚಾರ್ಯರಿಗೆ ಸಹಿಸಲಾಗದ ಕೋಪವು ಬಂದಾಗ " ನಾನು ಯಾರೆಂದು ಗೊತ್ತಿದೆಯೇನೋ. ದ್ವಾಪರ ಯುಗದ ದೃಷ್ಟದ್ಯುಮ್ನ, ನಿಲ್ಲು ಇಲ್ಲಿ ಎಂದು ವೇಗವಾಗಿ ಅವನ ಬಳಿಗೆಹೋಗಿ ಅವನ ಹತ್ತಿರವಿದ್ದ ಉದ್ದವಾಗಿದ್ದ ಕಬ್ಬಿಣದ ಗಡಾರೆಯನ್ನು ಕೈಗೆ ತೆಗೆದುಕೊಂಡು ಬಾಳೆನಾರನ್ನು ಸುತ್ತುವಂತ ಸುರಳಿ ಸುತ್ತಿ ಅವನ ಕುತ್ತಿಗೆಗೆ ಸುತ್ತು ಬಿಟ್ಟರು. ವಯೋವೃದ್ಧರಾದ ಇವರ ಅಮಾನುಷವಾದ ಈ ಕೃತ್ಯಕ್ಕೆ ಬೆದರಿದ ಆ ಹೊಲದ ಯಜಮಾನನು ತನ್ನ ಪ್ರಾಣವು ಉಳಿದರೆ ಸಾಕೆಂದು ಹಂಬಲಿಸುತ್ತಾ ಬಂದು ಕಾಲಿಗೆ ಬಿದ್ದು ತಪ್ಪಾಯಿತೆಂದು ಕ್ಷಮಾಪಣೆ ಕೇಳಿ ತನಗೆ ಜೀವದಾನ ಮಾಡಬೇಕೆಂದು ಬೇಡಿಕೊಂಡನು. ಆಗ ಐಜೀ ಆಚಾರ್ಯರು ಆ ಗಡಾರಿಯನ್ನು ಮತ್ತೆ ಬಾಳೆನಾರಿನಂತೆ ಬಿಡಿಸಿ ಅವನಿಗೆ ಜೀವದಾನ ಮಾಡಿ ತಮ್ಮ ಪ್ರಯಾಣವನ್ನು ಪರಿವಾರದ ಸಹಿತ ಮುಂದುವರೆಸಿ ವೇಣೀಸೋಮಪುರಕ್ಕೆ ಬಂದು ತಲುಪಿದರು.

ವೇಣೀಸೋಮಪುರಕ್ಕೆ ಬಂದ ನಂತರ ಏಕಾಂತದಲ್ಲಿ ಶ್ರೀ ಗೋಪಾಲ ದಾಸರ ತಮ್ಮಂದಿರಾದ ದಾಸಪ್ಪ ದಾಸರೊಡನೆ ದಿನ್ನಿ ಗ್ರಾಮದಿಂದ ಹಿಂದಿರುಗಿ ಬರುವಾಗ ನಡೆದ ಘಟನೆಯನ್ನು ಹೇಳಿದರು. ದಾಸಪ್ಪನವರೇ ! ನನ್ನ ಸ್ವರೂಪವು ವ್ಯಕ್ತವಾಗಿ ಬಿಟ್ಟಿದೆ. ದೇವತೆಗಳು ಭೂಲೋಕದಲ್ಲಿ ಬಂದು ಪರಮಾತ್ಮನ ಸಂಕಲ್ಪದಂತೆ ತಮ್ಮ ತಮ್ಮ ಅವಕಾಶ ಕಾರ್ಯಗಳು ಮುಗಿದು ತಮ್ಮ ನಿಜವಾದ ಸ್ವರೂಪವು ಪ್ರಕಟವಾದಾಗ ದೇಹತ್ಯಾಗ ಮಾಡುತ್ತಾರೆ. ಅದರಂತೆ ನಾನೂ ಸಹ ಈಗ ದೇಹವನ್ನು ತ್ಯಜಿಸಬೇಕಾಗಿದೆ

ಆದರೆ ನನಗೆ ಪರಮಾತ್ಮನ ಆಜ್ಞೆಯಾಗಿದೆ. ಗೃಹಸ್ಥಾಶ್ರಮಿಯಾಗಿ ಹನ್ನೆರಡಾವರ್ತಿ ಸುಧಾ ಮಂಗಳವನ್ನೂ ಸನ್ಯಾಸಿಯಾಗಿ ಆರು ಸಲ ಸುಧಾ ಮಂಗಳವನ್ನೂ ಮಾಡಬೇಕೆಂದು ಸ್ವಪ್ನ ಸೂಚನೆಯಾಗಿದೆ. ಇತ್ಯಾದಿಯಾಗಿ ದಾಸಪ್ಪ ದಾಸರಲ್ಲಿ ಪರ್ಯಾಲೋಚಿಸಿದರು.

ತಮಗೆ ಇನ್ನೂ ಬಿಂಬಸಾಕ್ಷಾತ್ಕಾರ ವಾಗದಿರುವುದಕ್ಕೆ ಮರುಗಿದರು. ಆಗ ದಾಸಪ್ಪ ದಾಸರು ಎಲ್ಲವನ್ನೂ ಕೇಳಿ ಕೆಲವು ಸಲಹೆಗಳನ್ನಿತ್ತರು. "ತಾವು ವಿರಕ್ತರಾಗಿರುತ್ತೀರಿ. ಈ ಗೃಹಸ್ಥಾಶ್ರಮದಿಂದ ವಾನಪ್ರಸ್ಥಾಶ್ರಮವನ್ನು ಕೈಗೊಳ್ಳಿರಿ. ಈ ತುಂಗಾನದಿಯ ಒಂದು ಗಡ್ಡೆಯಲ್ಲಿ ಒಂದು ಪರ್ಣಕುಟೀರದಲ್ಲಿ ಎರಡು ವರ್ಷಗಳ ಕಾಲ ತಪಸ್ಸನ್ನು ಆಚರಿಸಿರಿ ಆ ವೇಳೆಗೆ ಒಂದು ವಿಚಿತ್ರವಾದ ಘಟನೆಯು ಬಂದೊದಗುತ್ತದೆ. ತಮ್ಮ ಇಷ್ಟವು ನೆರವೇರುತ್ತದೆಯೆಂದು ಸಲಹೆ ಇತ್ತರು. ಈ ರೀತಿ ಮಾಡುವುದರಿಂದ ತಮ್ಮ ಸ್ವರೂಪವು ವ್ಯಕ್ತವಾದರೂ ಜನ್ಮಾಂತರವಾದಂತೆ ಆಗುವುದು. ಯಾವ ಕ್ಷುಂದಕವೂ ಆಗಲಾರದೆಂದು ಹೇಳಿದರು. ಅದರಂತೆ ಶ್ರೀ ಐಜೀ ಆಚಾರ್ಯರು ಮನೆ, ಹೊಲ, ಗದ್ದೆ, ಬೆಳ್ಳಿ ಬಂಗಾರ ಮೊದಲಾದವುಗಳನ್ನೆಲ್ಲಾ ತ್ಯಜಿಸಿ ಅಖಂಡವಾಗಿ ತುಂಗೆಯ ಗಡ್ಡೆಯಲ್ಲಿ ವಾಸಮಾಡುತ್ತ ಘೋರವಾದ ತಪಸ್ಸಿನಲ್ಲಿ ನಿರತರಾದರು. ಬಿಂಬ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿ ಪರಮಾತ್ಮನನ್ನು ಸ್ತುತಿಸಿದ ಪದ್ಯವು ಈ ರೀತಿ ಇದೆ.

"ರಾಗಪೀಲು – ಆದಿತಾಳ"

ಎಂದಿಗೆ ನಿನ್ನ ಪಾದಕಾಂಬೆ ಸ್ವಾಮಿ । (ರಂಗ)
ಎಂದಿಗೆ ನಿಮ್ಮ ಪಾದಕಾಂಬೆ ॥ ಪಲ್ಲ ॥
ಎಂದಿಗೆ ನಿನ್ನ ಪಾದಕಂಡೆ ಭಕುತಿಯಿಂದ
ಅಂದಿಗೆ ಭವಪಾಶತುಂಡೇ ಸ್ವಾಮಿ (ರಂಗ) ॥ ಅನುಪಲ್ಲ ॥
ಇಂದಿರ ದೇವಿ ನಿನ್ನ ಹೊಂದಿದ್ದ ಕಾರಣ

ದಂದೂಗವನ್ನು (ದ್ವಂದೌಘ) ಕಾಣಲಿಲ್ಲ ಸ್ವಾಮಿ ॥ ೧ ॥
ಬೊಮ್ಮನು ನಿನ್ನ ಪಾದ (ಮಗ) ನಮ್ಮ ತುತಿಸುವ (ಆವಗ) ನಿನ್ನ
ಮೊಮ್ಮಗ ಕುಣಿ ಕುಣಿದಾಡುವ
(ನಿನ್ನಾಣೆ [ನಿನ್ನನ್ನೆ] ವಾಸುದೇವ ವಿಠ್ಠಲಾ ಎನ್ನ)
ಮನ್ನಾದಿ ಭಜಸೋವ ಬಲ್ಲೆಲೊ ಸ್ವಾಮಿ ॥ ೩ ॥
(ಮನ್ನಾದಿ ಬಯಸದು ಕಾಣಿತೋ ರಂಗ)

ಎರಡು ವರ್ಷಗಳ ಕಾಲ ತುಂಗಾನದಿಯ ಗಡ್ಡೆಯಲ್ಲಿ ವಾನಪ್ರಸ್ಥಾಶ್ರಮದಲ್ಲಿದ್ದು ಪರಮಾತ್ಮನ ತಪಸ್ಸಿನಲ್ಲಿದ್ದಾಗ ದೈವಸಂಕಲ್ಪದಂತೆ ಪೂನಾದಲ್ಲಿದ್ದ ಶ್ರೀ ವರದೇಂದ್ರತೀರ್ಥರ ಶಿಷ್ಯವರೇಣ್ಯರಾದ, ಶ್ರೀ ರಾಘವೇಂದ್ರ ಗುರು ಸಾರ್ವಭೌಮರ ಪೀಠಿಗೆಯಲ್ಲಿ ಶ್ರೀ ರಾಯರಿಂದ ಹತ್ತನೆಯ ವೇದಾಂತ ಸಾಮ್ರಾಜ್ಯ ಪೀಠಾಧಿಪತಿಗಳಾಗಿದ್ದ ಶ್ರೀ ಶ್ರೀ ಭುವನೇಂದ್ರತೀರ್ಥ ಶ್ರೀಪಾದಂಗಳವರು ದೈವಪ್ರೇರಣೆಯಿಂದ ವೇಣೀಸೋಮಪುರಕ್ಕೆ ಬಂದರು. ಐಜೀ ಆಚಾರ್ಯರು ಭಕ್ತಿಭಾವದಿಂದ ಶ್ರೀಶ್ರೀಗಳವರಲ್ಲಿ ತಮ್ಮ ಬಿಂಬ ಸಾಕ್ಷಾತ್ಕಾರದ ಬಯಕೆಯನ್ನು ರಹಸ್ಯದಲ್ಲಿ ತಿಳಿಸಿದಾಗ, ಶ್ರೀ ಭುವನೇಂದ್ರ ತೀರ್ಥರು ನೀವು ಶ್ರೀಮದ್ಭಾಗವತದಪಳನೇ ಸ್ಕಂಧಕ್ಕೆ ಒಂದು ವ್ಯಾಖ್ಯಾನವನ್ನು ರಚಿಸಿ ಪರಮಾತ್ಮನಿಗೆ ಸಮರ್ಪಿಸಿರಿ ಎಂದು ಸಲಹೆಯನ್ನಿತ್ತರು. ಆ ಗುರುವರ್ಯರ ಅಪ್ಪಣೆಯಂತೆ "ಮಂದ ನಂದಿನೀ" ಎಂಬ ವ್ಯಾಖ್ಯಾನವನ್ನು ಶ್ರೀ ಭಾಗವತದ ಏಳನೇಯ ಸ್ಕಂಧಕ್ಕೆ ರಚಿಸಿ ಗುರುಗಳಿಗೆ ಸಮರ್ಪಿಸಿದರು.

ಅನಂತರದಲ್ಲಿ ಶ್ರೀ ಭುವನೇಂದ್ರತೀರ್ಥರು ಶ್ರೀ ಐಜೀ ವೆಂಕಟರಾಮಾರ್ಯರಿಗೆ ಶುಭ ಮುಹೂರ್ತದಲ್ಲಿ ವಿಧಿಪ್ರಕಾರವಾಗಿ ಸನ್ಯಾಸಾಶ್ರಮವನ್ನು ಕೊಟ್ಟು. ಇವರು ಶ್ರೀ ವೇದವ್ಯಾಸದೇವರ ಸಚ್ಛಾಸ್ತ್ರದಲ್ಲಿ ಪಾರಂಗತರಾಗಿರುವುದರಿಂದ "ಶ್ರೀ ವ್ಯಾಸತತ್ವಜ್ಞ ತೀರ್ಥರು" ಎಂಬುದಾಗಿಯೇ ನಾಮಕರಣ ಮಾಡಿ, ಪ್ರಣವಾದಿ ಮಹಾಮಂತ್ರಗಳನ್ನು ಉಪದೇಶಕೊಟ್ಟರು, ಅಂದಿನಿಂದ "ಶ್ರೀ ವ್ಯಾಸತತ್ತ್ವಜ್ಞ ತೀರ್ಥ"ರೆಂದೇ ವಿಖ್ಯಾತರಾದರು.

ಶ್ರೀಮನ್ನ್ಯಾಯಸುಧಾ ಪ್ರವಚನವು ಹಿಂದೆ ಮೂರು ವರ್ಷಕ್ಕೊಂದಾವರ್ತಿ ಮುಗಿದು ಪ್ರತಿ ಸಲದ ಮಂಗಳ ಮಹೋತ್ಸವವೂ ತಿರುಪತಿಯಲ್ಲಿ ಶ್ರೀನಿವಾಸನ ಸನ್ನಿಧಿಯಲ್ಲಿ ಹನ್ನೆರಡಾವರ್ತಿ ನಡೆದಿತ್ತು. ಈಗ ಸನ್ಯಾಸಾಶ್ರಮವನ್ನು ಸ್ವೀಕರಿಸಿದ ತರುವಾಯು ಹಿಂದಿಗಿಂತಲೂ ಇಮ್ಮಡಿಯಾದ ಶಿಷ್ಯವರ್ಗಕ್ಕೆ ಪಾಠ ಹೇಳಿ ಆರು ಸಲ ಶ್ರೀಮನ್ನ್ಯಾಯಸುಧಾ ಮಂಗಳ ಮಹೋತ್ಸವವನ್ನು ನಡೆಸಿದರು. ಇವರಿಗೆ ಸನ್ಯಾಸಾಶ್ರಮವನ್ನು ಕರುಣಿಸಿದ ಶ್ರೀಭುವನೇಂದ್ರತೀರ್ಥ ಶ್ರೀಪಾದಂಗಳವರು ತಮ್ಮ ಶಿಷ್ಯರಾದ ಇವರ ನ್ಯಾಯಸುಧಾ ಪ್ರವಚನವನ್ನು ಶ್ಲಾಘಿಸಿದ್ದರಲ್ಲದೆ ಇವರಿಗೆ ತಮ್ಮಿಂದ ಪೂಜಿತನಾಗುತ್ತಿದ್ದ ಹಿಂದೆ ಶ್ರೀ ವಿಬುಧೇಂದ್ರತೀರ್ಥರಿಗೆ ಅಹೋಬಲ ಕ್ಷೇತ್ರದಲ್ಲಿ ಸ್ವಪ್ನಲಬ್ಧವಾದ ಷೋಡಶಬಾಹು ಶ್ರೀಮನ್ನೃಸಿಂಹ ದೇವರನ್ನು ಪೂಜೆಗಾಗಿ ಕೊಟ್ಟು ಅನುಗ್ರಹಿಸಿದರು.

ಆ ನೃಸಿಂಹದೇವರ ಬಗ್ಗೆ ಒಂದು ಸುಳಾದಿಯನ್ನು ರಚಿಸಿದ್ದಾರೆ ಅದು ಈ ರೀತಿ ಇದೆ.

ಸ್ಮೃತಿ ವಾರಿಧಿಯೊಳಗೆ (ಸರತಿನೊಳಗೆ) ಶಳವಿಗೆ ಪೋಗುವಂತೆ ।
ಗತಿ ಯಾಗಿ ಧಡಕೆ ಸೇರಿಸಿದ್ಯೋ ಸ್ವಾಮೀ (ಹರಿಯೇ)
ಯತಿ ಮಾಡಿ ಕೂಡಿಸಿದಿ ನಿನ್ನ ಪಾದಾಂಬುಜದಲ್ಲಿ ।
ರತಿ ಕೊಟ್ಟು ಉದ್ಧರಿಸೋ ವಾಸುದೇವ ವಿಠ್ಠಲ ॥೧॥ ಇತ್ಯಾದಿ

ಇವರ ಸಾಕ್ಷಾತ್ ಶಿಷ್ಯರು ಕರಾವಲಂಬನ ಸ್ತೋತ್ರದಲ್ಲಿ ಈ ರೀತಿ ನುಡಿದಿದ್ದಾರೆ.

ಗೇಹಾದಿಜನ್ಯ ವಿಷಯಾತಿವಿರಾಗ ಬುದ್ಧ್ಯಾಯತ್ಯಾಶ್ರಮಂ
ಸಮಧಿಗಮ್ಯ ಜಪಂತ್ರಿಮೂರ್ತ್ರಂ ।
ಮಂತ್ರೋತ್ತಮಂ ಯತಿರಾಜಾದ್ಭುವನೇಂದ್ರತೀರ್ಥಾತ್ತತ್ವಜ್ಞ
ತೀರ್ಥಮಮದೇಹಿ ಕರಾವಲಂಬಂ ॥
ವೇದಾಂತ ರಾಜ್ಯಪರಿಪಾಲನ ಮೇಧಯಾಯಂ
ಕೃತ್ವಾಗುರುರ್ದ್ವರಗಕೈರಭಿಷೇಕವಂತಂ ।

ವ್ಯಾಸಾದಿತತ್ವವಿದಿತಿ ಪ್ರಕಟೋತ್ಸಮಾಖ್ಯಾಂ
ತತ್ವಜ್ಞ ತೀರ್ಥ ಮಮದೇಹಿ ಕರಾವಲಂಬಂ ॥ ॥೩॥ ಇತ್ಯಾದಿ
ಸತ್ಯಾಧನಾನಿ ನಭಂವತ್ಯಥ ರಾಜ್ಯಭಾರೇ ।
ಸನ್ಯಾಸಿನಾಮಧಿಪತೇ ಗುರುಣಾಪ್ರದತ್ತಾಂ ।
ತ್ಯಕ್ತ್ವಾಧಿ ರಾಜ್ಯ ಮಜಿತಾಂಘ್ರಿ ಯುಗಂ ಭಜಂಸ್ತೇ ।
ತತ್ವಜ್ಞತೀರ್ಥ ಮಮದೇಹಿ ಕರಾವಲಂಬಂ ॥ ಇತ್ಯಾದಿ

ಶ್ರೀ ಐಜೀ ವೆಂಕಟರಮಾರ್ಯರು ಶ್ರೀ ಶ್ರೀ ಭುವನೇಂದ್ರತೀರ್ಥರಿಂದ ಯಾತ್ಯಾಶ್ರಮವನ್ನು ಪಡೆದು ಶ್ರೀ ವ್ಯಾಸತತ್ವಜ್ಞತೀರ್ಥರೆಂಬ ಶುಭ ನಾಮಕರಣದ ಮೇಲೆ ಅಮಾನುಷಗಳಾದ ಅದ್ಭುತ ಪವಾಡಗಳನ್ನೇ ನಡೆಸಿದ್ದಾರೆ, ಕೆಲವನ್ನು ಮಾತ್ರ ನಾವು ಇಲ್ಲಿ ಸಂಗ್ರಹಿಸಿ ತಿಳಿಸುತ್ತೇವೆ. ಅನೇಕ ರಹಸ್ಯಗಳನ್ನು ನಾವು ಪ್ರಕಟಿಸಿಲ್ಲ. ಅದೆಲ್ಲಾ ದೈವಗುಹ್ಯ ಸಂಗತಿಗಳಾಗಿವೆ.

ಆಗಿನ ಕಾಲದಲ್ಲಿ ಗದ್ವಾಲರಾಜಾಸ್ಥಾನವು ಒಂದು ಆಶ್ರಿತ ರಾಜ್ಯವಾಗಿತ್ತು. ಅದು ನವಾಬರ ರಾಜ್ಯಕ್ಕೆ ಸೇರಿತ್ತು. ಪ್ರತಿವರ್ಷವೂ ಗದ್ವಾಲ ರಾಜರು ನವಾಬರಿಗ ಕಪ್ಪ ಕಾಣಿಕೆಗಳನ್ನು ಕೊಡುತ್ತಿದ್ದರು, ಆದರೆ ಕೆಲವು ವರ್ಷಗಳಿಂದಲೂ ಗದ್ವಾಲರಾಜರು ಕೊಡಬೇಕಿದ್ದ ಕಾಣಿಕೆಗಳನ್ನು ನವಾಬರಿಗೆ ಕೊಡದೇ ನಿಲ್ಲಿಸಿದ್ದರು. ಇದೊಂದು ವಿಚಾರದಲ್ಲಿ ನವಾಬರಿಗೆ ಗದ್ವಾಲ ರಾಜರ ಮೇಲೆ ಕೋಪವು ಬಂದಿತ್ತು. ಇದರ ಜೊತೆಗೆ ಮತ್ತೊಂದು ಘಟನೆಯು ಸಹ ನವಾಬರ ಕೋಪದ ಅತಿರೇಕಕ್ಕೆ ಕಾರಣವಾಯಿತು. ಏನೆಂದರೆ ತಮಗೆ ಆಶ್ರಮವನ್ನು ಅನುಗ್ರಹಿಸಿದ ಶ್ರೀ ಭವನೇಂದ್ರತೀರ್ಥರಿಗೆ ದೇಹಾಲಸ್ಯವಾಗಿತ್ತು ಆಗ ಶ್ರೀ ವ್ಯಾಸತತ್ವಜ್ಞತೀರ್ಥರು ಪ್ರಮುಖವಹಿಸಿ ಶ್ರೀ ಭುವನೇದ್ರತೀರ್ಥರಿಂದ ಶ್ರೀ ಸುಭೋದೇಂದ್ರತೀರ್ಥರಿಗೆ ಆಶ್ರಮ ನಾಮಕರಣ ಮಂತ್ರೋಪದೇಶ ಮಾಡಿಸಿದರು.

ಶ್ರೀ ಭುವನೇಂದ್ರ ತೀರ್ಥರು ರಾಜೋಳಿ ಎಂಬ ಗ್ರಾಮದಲ್ಲಿ ದೇಹತ್ಯಾಗ ಮಾಡಿದರು ಆ ಊರಿನವರೂ ಮತ್ತು ಅಕ್ಕಪಕ್ಕದ ಹಳ್ಳಿಯ ಜನರೆಲ್ಲರೂ ಸಹ ಶ್ರೀ ಭುವನೇಂದ್ರತೀರ್ಥರ ಬೃಂದಾವನವನ್ನು ರಾಜೋಳಿ

ಗ್ರಾಮದಲ್ಲಿ ಮಾಡಲು ನಾನಾವಿಧವಾಗಿ ತಕರಾರು ಮಾಡಿದರು. ಆದಾಗ್ಯೂ ಶ್ರೀ ವ್ಯಾಸತತ್ವಜ್ಞ ತೀರ್ಥರ ಪ್ರಭಾವದಿಂದ ಗದ್ವಾಲಮಹಾರಾಜರು ಕಮಲದ ಕಟ್ಟೆಯನ್ನು ಜನರ ಎಲ್ಲರ ಅಡ್ಡಿ ಆತಂಕಗಳನ್ನು ಲಕ್ಷಿಸದೇ ಶ್ರೀ ಭುವನೇಂದ್ರತೀರ್ಥರ ಬೃಂದಾವನ ಪ್ರತಿಷ್ಠೆಗೆ ತಕ್ಕವ್ಯವಸ್ಥೆ ಮಾಡಿದನು. ರಾಜೊಳ್ಳಿ ಗ್ರಾಮದಲ್ಲಿಯೇ ಭವ್ಯವಾದ ಉತ್ಸವ ಸಮೇತವಾಗಿ ಬೃಂದಾವನ ಪ್ರತಿಷ್ಠೆಯಾಯಿತು. ಆದಾಗ್ಯೂ ಸಹ ಆ ಊರಿನ ಜನರಲ್ಲಿ ಅನೇಕರು ನವಾಬರಿಗೆ ಗದ್ವಾಲ ಮಹಾರಾಜನ ಬಗ್ಗೆ ದೂರಿತ್ತರು. ಮೊದಲೇ ಕಪ್ಪ-ಕಾಣಿಕೆಗಳನ್ನು ಸರಿಯಾಗಿ ಕೊಡುತ್ತಿಲ್ಲವೆಂಬ ಕಾರಣದಿಂದ ಕೋಪಗೊಂಡ ನವಾಬರು ಈ ಘಟನೆಯಿಂದ ಮತ್ತಷ್ಟು ಕ್ರೋಧಾವಿಷ್ಟನಾದನು. ಗದ್ವಾಲ ರಾಜ್ಯವನ್ನೇ ಅಳಿಸಿಬಿಟ್ಟು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದನು.

ತನ್ನ ಸೇನಾ ನಾಯಕರನ್ನು ಬರಮಾಡಿಕೊಂಡು, ಗದ್ವಾಲ ರಾಜ್ಯದ ಮೇಲೆ ಆಕ್ರಮಣ ಮಾಡಬೇಕೆಂದು ಆಜ್ಞೆ ಮಾಡಿದನು, ನವಾಬರ ಅಪ್ಪಣೆಯಂತೆ ನವಾಬ ಸೈನ್ಯವು ಗದ್ವಾಲ ಸಂಸ್ಥಾನದ ಪರಿಸರಕ್ಕೆ ಬಂದು ತಲುಪಬೇಕಾದರ ಮಧ್ಯದಲ್ಲಿ ಕೃಷ್ಣಾ ನದಿಯನ್ನು ದಾಟಬೇಕು. ಆಗಿನ ಸಮಯ ವೈಶಾಖ ಮಾಸ, ನದಿಯಲ್ಲಿ ಎಲ್ಲೋ ಕಾಲುವೆಯಂತೆ ನೀರು ಹರಿಯುತ್ತಿತ್ತು. ಆದ್ದರಿಂದ ನವಾಬ ಸೈನ್ಯವು ಒಂದೇ ರಾತ್ರಿಯಲ್ಲೇ ಬಂದು ನದಿಯ ಪಕ್ಕದಲ್ಲೇ ಬಿಡಾರ ಬಿಟ್ಟಿತ್ತು. ಮಾರನೆಯ ದಿನವೇ ಗದ್ವಾಲ ರಾಜ್ಯದ ಆಕ್ರಮಣಕ್ಕೆ ತಕ್ಕ ಸಿದ್ಧತೆಯಿಂದ ಕೂಡಿತ್ತು. ಹೀಗಿರುವಲ್ಲಿ ಈ ಎಲ್ಲಾ ಸಂಗತಿಗಳೂ ಗೂಢಚಾರರ ಮೂಲಕ ಗದ್ವಾಲ ರಾಜರಿಗೆ ಗೊತ್ತಾಯಿತು. ಗದ್ವಾಲಿನ ಹಿಂದೂ ರಾಜನು ಧಾರ್ಮಿಕನಾದವನು. ಮೇಲಾಗಿ ಶ್ರೀ ವ್ಯಾಸ ತತ್ವಜ್ಞರ ಭಕ್ತ, ತನ್ನ ರಾಜ್ಯದ ಆಕ್ರಮಣಕ್ಕಾಗಿ ನವಾಬನ ಸೈನ್ಯವು ಕೃಷ್ಣಾ ನದೀಪಾತ್ರದಲ್ಲಿ ಬೀಡು ಬಿಟ್ಟಿದೆ. ನಾಳೆಯೇ ನಮ್ಮ ರಾಜ್ಯವನ್ನೂ ಆಕ್ರಮಿಸುತ್ತಾರಂತೆ, ಮಹಾಸ್ವಾಮಿ, ನಮ್ಮನ್ನು ತಾವು ರಕ್ಷಿಸಬೇಕು ಎಂಬುದಾಗಿ ಗದ್ವಾಲರಾಜನು ಶ್ರೀ ವ್ಯಾಸತತ್ವಜ್ಞತೀರ್ಥರಿಗೆ ಮನವಿ ಪತ್ರವನ್ನು ಬರೆದು ಅತಿಶೀಘ್ರವಾಗಿ ಬರತಕ್ಕ ರಾಜದೂತರ ಮೂಲಕ ಕಳುಹಿಸಿದನು. ಒಂದು

ಪಲ್ಲಕ್ಕಿಯನ್ನು ಕಳುಹಿಸಿದನು. ಆ ರಾಜದೂತರು ವೇಣಿಸೋಮಪುರಕ್ಕೆ ಬಂದು ಶ್ರೀಶ್ರೀಗಳವರಿಗೆ ರಾಜನ ಪ್ರಾರ್ಥನಾ ಪತ್ರಿಕೆಯನ್ನು ಮುಟ್ಟಿಸಿದರು. ರಾಜನು ಒಂದು ಪಲ್ಲಕ್ಕಿಯನ್ನು ಕಳುಹಿಸಿದ್ದನು. ಅಪರೋಕ್ಷ ಜ್ಞಾನಿಗಳಾದ ಅನೇಕ ಪವಾಡಗಳನ್ನು ನಡೆಸಿರುವ ಮಹಾನುಭಾವರಾದ ಶ್ರೀವ್ಯಾಸ ತತ್ವಜ್ಞ ತೀರ್ಥರು ಒಂದು ಕಾಗದದಲ್ಲಿ ಒಂದು ಶ್ಲೋಕವನ್ನು ಬರೆದು. ಶ್ರೀಮನ್ನೃಸಿಂಹ ದೇವರನ್ನು ಪ್ರಾರ್ಥಿಸಿ ಅಭಿಮಂತ್ರಿಸಿದ ಮಂತ್ರಾಕ್ಷತೆಗಳ ಸಹಿತವಾಗಿ ಆ ಶ್ಲೋಕವನ್ನು ಬರೆದ ಕಾಗದವನ್ನೂ ಮಂತ್ರಾಕ್ಷತೆಯನ್ನೂ ಪಲ್ಲಕ್ಕಿಯಲ್ಲಿ ಅಲಂಕರಿಸಿಟ್ಟು, ಇದನ್ನೆಲ್ಲಾ ತೆಗೆದುಕೊಂಡು ಹೋಗಿರಿ. ನಡು ರಾತ್ರಿಯಲ್ಲಿ ಶ್ರೀ ಕೃಷ್ಣಾ ನದಿಗೆ ಪೂಜಾದಿಗಳನ್ನು ಸಲ್ಲಿಸಿ ಅಲ್ಪವಾದ ನದೀ ಪ್ರವಾಹದಲ್ಲಿ ತೇಲುಬಿಟ್ಟುಬಿಡಿ ಎಂದು ತಿಳಿಸಿ ಕಳುಹಿಸಿದರು.

ಶ್ರೀಶ್ರೀಗಳವರ ಆಜ್ಞೆಯಂತೆ ರಾಜನು ಎಲ್ಲವನ್ನೂ ಮಾಡಿಸಿದನು. ಆಗ ವೈಶಾಖವಾಗಿತ್ತು. ನದಿಯು ಚಿಕ್ಕ ಕಾಲುವೆಯಂತೆ ಹರಿಯುತ್ತಿತ್ತು. ನದೀಪಾತ್ರವೆಲ್ಲಾ ಒಣಗಿ ಹೋಗಿತ್ತು. ಹೀಗಿರುವಲ್ಲಿ ಯಾವಾಗ ಗದ್ವಾಲ ರಾಜನ ಕಡೆಯವರು, ಶ್ರೀ ವ್ಯಾಸತತ್ವಜ್ಞರು ಕಳುಹಿಸಿದ ಶ್ಲೋಕದ ಕಾಗದವನ್ನೂ ಮಂತ್ರಾಕ್ಷತೆಗಳನ್ನೂ ನದೀಪಾತ್ರದಲ್ಲಿ ತೇಲಿ ಬಿಟ್ಟರೋ ಆಕ್ಷಣದಲ್ಲೇ ಅದ್ಭುತವಾದ ಪೂರ್ಣ ಪ್ರವಾಹವು ಅನಿರೀಕ್ಷಿತವಾಗಿ ಭೋರ್ಗರೆಯುತ್ತಾ ಬಂದು ನದೀ ಪಾತ್ರದಲ್ಲಿ ಬೀಡು ಬಿಟ್ಟಿದ್ದ ನವಾಬನ ಸೈನ್ಯವನ್ನು ನಿರ್ನಾಮ ಮಾಡಿಬಿಟ್ಟಿತು.

ಶ್ರೀ ವ್ಯಾಸತತ್ವಜ್ಞ ತೀರ್ಥರು ಬರೆದು ಕಳುಹಿಸಿದ ಶ್ಲೋಕವು ಈ ರೀತಿ ಇದೆ.

ಧರ್ಮೋ ಭವತು ಸದ್ಧರ್ಮಃ ಮಾರ್ಗಣಾಃ ಸಂತುಮಾರ್ಗಣಾಃ ।
ವಾಹಿನೀ ವಾಹಿನೀ ರಾಜನ್ ಸ್ಯಾದರಾತಿ ಪರಾಜಯಃ ॥ಇತಿ॥

ಬೆಳಗಾಗುವುದರೊಳಗಾಗಿ ನವಾಬನ ಸೈನ್ಯವೆಲ್ಲಾ ಕೃಷ್ಣ ವೇಣಿಯು ಪೂರ್ಣಪ್ರವಾಹದಲ್ಲಿ ಕೊಚ್ಚಿಹೋದ ಸಂಗತಿಯು ಗದ್ವಾಲ್ ರಾಜನಿಗೆ

ತಿಳಿಯಿತು. ಆನಂದ ಭರಿತನಾದ ರಾಜನು ಶ್ರೀ ವ್ಯಾಸತತ್ವಜ್ಞ ತೀರ್ಥರು ಮಾಡಿದ ಅಮಾನುಷವಾದ ಪವಾಡಕ್ಕೆ ಮೆಚ್ಚಿ ತನಗೆ ಬಂದಿದ್ದ ವಿಪತ್ತು ಪರಿ. ಹಾರಮಾಡಿಮುದರ ಕೃತಜ್ಞತೆಗಾಗಿ ಭಕ್ತಿಯಿಂದ ಶ್ರೀ ಶ್ರೀಗಳವರಿಗೆ ತನ್ನ ರಾಜ್ಯಕ್ಕೆ ಸೇರಿದ ಐಜೀ ಗ್ರಾಮವನ್ನೇ ದಾನವಾಗಿ ಕೊಡುತ್ತೇನೆಂದು ಹೇಳಿದನು. ಅದಕ್ಕೆ ಶ್ರೀ ಶ್ರೀಗಳವರು ಆನೆಯು ಬೇಡ ಒಂದು ಆಕಳು ಸಾಕೆಂದರು. ಆಗ "ಏಕಲಾಸಪುರ" ಎಂಬ ಜಹಗೀರಿಯನ್ನು ಕಾಣಿಕೆಯಾಗಿ ಕೊಟ್ಟನು.

ಈ ಎಲ್ಲಾ ಸಂಗತಿಯೂ ಐತಿಹಾಸಿಕವಾಗಿ ನೈಜಾಂ ಸರ್ಕಾರದ ರಿಕಾರ್ಡುಗಳಲ್ಲಿ ದಾಖಲಾಗಿದೆ. ಇಂದಿಗೂ ಆ ದಾಖಲೆಗಳನ್ನು ಕಾಣ ಬಹುದಾಗಿದೆ.

## ಮತ್ತೊಂದುಮಹಿಮೆ

ತುಂಗಾ ನದಿಯು ಶ್ರೀ ವ್ಯಾಸತತ್ವಜ್ಞರ ಪ್ರಾರ್ಥನೆಯಂತೆ ಇವರ ಆಶ್ರಮದ ಬಳಿಗೆ ಬಂದದ್ದು.

ತುಂಗಾನದಿಯು ಶ್ರೀ ವ್ಯಾಸತತ್ವಜ್ಞರ ಆಶ್ರಮಕ್ಕೆ ಬಹುದೂರದಲ್ಲಿ ಹರಿಯುತ್ತಿತ್ತು. ನಿತ್ಯವೂ ಅತಿ ವೃದ್ಧರಾದ ಶ್ರೀ ಶ್ರೀಗಳವರು ಹೋಗಿ ಸ್ನಾನಾದಿಗಳನ್ನು ಮಾಡಿಕೊಂಡು ಬರಲು ಕಷ್ಟವಾಗುತ್ತಿತ್ತು. ಆಗ " ವೃದ್ಧನಾದ ನಾನು ನಿನ್ನ ಹತ್ತಿರ ಸ್ನಾನಕ್ಕಾಗಿ ಬರಲಾರೆನಮ್ಮ" ಎಂದು ಪ್ರಾರ್ಥಿಸಿದರು. ಇವರ ಪ್ರಾರ್ಥನಯಂತೆ ಸ್ವಪ್ನದಲ್ಲಿ ತುಂಗಾದೇವಿಯು ಕಾಣಿಸಿಕೊಂಡು, ಹಾಗೆಯೇ ಆಗಲಿ ಸ್ವಾಮಿ, ನಾನು ನಿಮ್ಮ ಆಶ್ರಮದ ಹತ್ತಿರವೇ ಹರಿಯುತ್ತೇನೆ. ನೀವು ನಿಮ್ಮ ದಂಡಕಾಷ್ಠದಿಂದ ಎಲ್ಲಿ ಗೆರೆ ಯನ್ನು ಹಾಕುತ್ತೀರೋ ಅಲ್ಲಿಗೆ ನಾನು ಬರುತ್ತೇನೆಂದು ತಿಳಿಸಿದಳು. ಮಾರನೇ ದಿನ ಬೆಳಗಿನ ಝಾವದಲ್ಲಿ ಶ್ರೀ ಶ್ರೀಗಳವರು ಶಿಷ್ಯಂದಿರಿಂದ ಕೂಡಿ ದವರಾಗಿ ಸ್ನಾನಾದಿಗಳನ್ನು ಮುಗಿಸಿದ ನಂತರ ತಮ್ಮ ದಂಡಕಾಷ್ಠದಿಂದ

ತಮ್ಮ ಆಶ್ರಮದ ಬಳಿಯಲ್ಲಿ ಗೆರೆ ಎಳೆದರು ಆದಕ್ಕೆ ಮಾರನೇ ದಿನವೇ ಇವರು ಗೆರೆಎಳೆದಿರುವ ಜಾಗಕ್ಕೇನೇ ಇವರ ಆಶ್ರಮಕ್ಕೆ ಅತಿ ಸಮೀಪದಲ್ಲಿಯೇ ತುಂಗಾ ಪ್ರವಾಹವು ಬರತೊಡಗಿತು. ಇಂದಿಗೂ ವೇಣೀ ಸೋಮಪುರದ ಗ್ರಾಮದ ಪಕ್ಕದಲ್ಲಿಯೇ ತುಂಗಾನದಿಯು ಹರಿಯುತ್ತಲಿದೆ. ಇದೊಂದು ಅದ್ಭುತ ಪವಾಡವನ್ನು ಕಂಡ ಜನರು ಬೆರಗಾದರು. ಶ್ರೀ ಶ್ರೀಗಳವರ ಮಹಿಮೆಯನ್ನು ಕೊಂಡಾಡಿದರು.

ಗ್ರಂಥ ರಚನೆ :— ಈ ಮಹಾನು ಭಾವರು ರಚಿಸಿರುವ ಸಂಸ್ಕೃತ ಭಾಷೆಯಲ್ಲಿರುವ ಗ್ರಂಥ ರತ್ನಗಳು.

1) ಮಾನಸಸ್ಮೃತಿ (ಉಪಾಸನಾವಿಭಾಗ)
2) ಸಪ್ತಮಸ್ಕಂಧ ಭಾಗವತಕ್ಕೆ ಮಂದನಂದಿನೀ ವ್ಯಾಖ್ಯಾನ
3) ಗಾಯತ್ರೀ ಸಾರ ಸಂಗ್ರಹ
4) ಉಭಯಾ ನೌಚಿತಿ
5) ಸುಧಾದ್ಯುಕ್ತಿ ರಹಸ್ಯ
6) ನ್ಯಾಯಾಮೃತ ಮಕ್ಷಿಕಾವ್ಯ ಜನ
7) ತಾತ್ಪರ್ಯ ಚಂದ್ರಿಕಾಶರದಾಗಮ
8) ಅದ್ವೈತಿ ಕುಟ್ಟನ ಇದರಲ್ಲಿ ಐಕ್ಯವಾದವನ್ನು ಖಂಡ ತುಂಡಾಗಿ ಖಂಡಿಸಿರುತ್ತಾರೆ,
9) ನ್ಯಾಯದಮನ
10) ಕುಲಿಶ
11) ಶ್ರೀಮದ್ವಿಷ್ಣು ತತ್ವನಿರ್ಣಯಕ್ಕೆ ಲಘು ಪ್ರಭಾ ಎಂಬ ಪ್ರೌಢ ವ್ಯಾಖ್ಯಾನ.
12) ಶ್ರೀಮದ್ವಿಷ್ಣು ತತ್ವವಿನಿರ್ಣಯಕ್ಕೆ ಗುರು ಪ್ರಭಾ ಎಂಬ ಅತ್ಯಂತ ಪ್ರೌಢ ವ್ಯಾಖ್ಯಾನ.

(ಇದನ್ನು ಯಾರೋ ಅವರ ಮನೆಗೆ ಹೋಗಿ ಅಪಹರಿಸಿಕೊಂಡು ಹೋಗಿದ್ದಾರೆಂಬ ವದಂತಿಯು ಇದೆ). ಇನ್ನೂ ಅಚ್ಚಾಗಿಲ್ಲ.

13) ಶ್ರೀಮನ್ನ್ಯಾಯಸುಧಾ ಪ್ರಾಣಾಧಿಕರಣಕ್ಕೆ ರಸರಂಜನೀ ಎಂಬ ವ್ಯಾಖ್ಯಾನ.

14) ಕನ್ನಡದಲ್ಲಿ (ಶ್ರೀ ವ್ಯಾಸದೇವಪಿತ್ಥಲಾಂಕಿತ) ಅನೇಕ ದೇವರನಾಮಗಳು. ಉಗಾಭೋಗಗಳು, ಸುಳಾದಿಗಳು. ಮೊದಲಾದುವುಗಳು.

ಇವರ ಮಹಿಮೆಯ ವಿಚಾರವಾಗಿ ಶ್ರೀ ಜಗನ್ನಾಥದಾಸಾರ್ಯರೂ ಸಹ ಹೇಳಿದ್ದಾರೆ.

ಕಾಂಬೋದಿ ರಾಗ ಝಂಪೆ ತಾಳ

ರಾಮಾರ್ಯ ನಿಮ್ಮಂಘ್ರಿ ಕಮಲಗಳಿಗೆ ।
ನಾ ಮುಗಿವೆ ಕರವ ಕರುಣದಿ ನೋಡು ವೆಂಕಟ (ಪ)

ಬಾಹ್ಯ ಕರ್ಮವ ತೊರೆದು ಸರ್ವಗತನಾದ ನರ ।
ಸಿಂಹನ ಪ್ರೀತಿಗಳಿಸುವ ಸ್ನೇಹದಿ ।
ಮಹ್ಯಮರರಿಗೆ ವಿದ್ಯೆ ವಸ್ತ್ರಾನ್ನ ಪ್ರತಿದಿವಸ ।
ಸಹ್ಯವಿಲ್ಲದೆ ಕೊಟ್ಟು ಮೋದಿಸುವ ವೆಂಕಟ ॥೧॥

ಶ್ರೀ ವಾಸುದೇವವಿಠಲನಂಘ್ರಿಗಳ ರಾ ।
ಜೀವ ಮಧುಕರ ಮಧ್ವಶಾಸ್ತ್ರಜ್ಞನೇ ।
ಆವದೇಶದೊಳಗಿದ್ದರೇನ್ಮರಿಯದೇ ನಿಮ್ಮ ।
ಸೇವಕರೊಳಗೆ ಎಣಿಸುವುದು ವೆಂಕಟ ॥೨॥

ಬಾಲಕನ ಬಿನ್ನಪ ಲಾಲಿಸಿ ಕರುಣದಿ ।
ಗೋಪಾಲ ವಿಠಲನ ದಾಸರ ಮಗನೆಂದು ।
ಪಾಲಿಸುವುದು ಪರಮ ಕರುಣಾಳು ।
ಜಗನ್ನಾಥ ವಿಠಲಗಾಳೆನಿಪ ಪವಮಾನಸಖನೆ ವೆಂಕಟ ॥೩॥

## ಕಾಂಬೋದಿ ರಾಗ ಝಂಪೆ ತಾಳ

ಕೃತಕೃತ್ಯನಾದೆನಿಂದಿನ ದಿನದೊಳು ।
ಕ್ಷಿತಿಸುರ ವೆಂಕಟರಾಮಾರ್ಯರ ಕಂಡು ॥ಪ॥

ಭೂಮಂಡಲದೊಳುಳ್ಳ ಸಕಲ ತೀರ್ಥ ಸ್ನಾನ ।
ಹೇಮಾದ್ರಿ ಮೊದಲಾದ ಕ್ಷೇತ್ರ ಯಾತ್ರೆ ।
ನೇಮ ಜಪ ತಪ ವ್ರತಾದಿಗಳ ಮಾಡಿದ ಪುಣ್ಯ ।
ಈ ಮಹಾತ್ಮರ ಕಂಡ ಮಾತ್ರ ಸಮನಿಸಿತು ॥೧॥

ಷಣ್ಣವತ್ಯಬ್ಧ ಪರ್ಯಂತ ಹರಿ ಮಹಿಮೆಗಳು ।
ಸನ್ನುತಿಯಲಿ ಶೃತಿಸ್ಮೃತಿಗಳಿಂದ
ಧನ್ಯರೆಂದೆನಿಸಿ ಮಹಿಯೊಳಗೆ ಪೂರಿತರಾದ ।
ಪುಣ್ಯ ಚರಿತರ ದಿವ್ಯ ಪಾದವನೆ ನಾ ಕಂಡು ॥೨॥

ಹೀನ ಜನರೇ ಬಹಳಕ್ಷೋಣಿಯು ಮೇಲೆ ಸು ।
ಜ್ಞಾನಿಗಳು ದುರ್ಲಭರು ಕಲಿಯುಗದಲಿ ।
ಆನತೇಷ್ಟಪ್ರದ ಜಗನ್ನಾಥವಿಠಲ ।
ತಾನೇ ಕರೆತಂದು ತೋರಿಪುನೀತನ ಮಾಡ ॥೩॥

## ರಾಗ ಬಿಲಹರಿ–ಝಂಪಿತಾಳ

ತೆರಳಿದರು ವ್ಯಾಸತತ್ವಜ್ಞರಿಂದು ।
ಪುರುಷೊತ್ತಮನ ಗುಣಗಳರುಪಿ ಸುಜನರಿಗೆ ॥ಪ॥

ವರದೌದ್ರಿನಾಮ ಸಂವತ್ಸರದ ಶ್ರಾವಣೋ ।
ತ್ತರಪಕ್ಷ ಅಷ್ಟಮೀ ಭೌಮವಾರ ।
ಭರಣಿ ನಕ್ಷತ್ರ ಪ್ರಾತಃಕಾಲದಲಿ ಸೋಮ ।
ಪುರದಿ ಗೋಪಾಲ ಕೃಷ್ಣನ ಪಾದ ಸನ್ನಿಧಿಗೆ ॥೧॥

ವೇದಾಬ್ಜ ಭವಸೂತ್ರ ಭಾಷ್ಯ ಭಾವಗತ ।
ಮೊದಲಾದ ಶಾಸ್ತ್ರಗಳ ಕೀರ್ತನೆ ಗೈಯುತ ।
ಪಾದೋಪಕವ ಶಿರದಿ ಧರಿಸುತಿಪ್ಪವರಘ ।
ತಿರೋಧಾನ ಗೈಸಿ ಪರಗತಿಮಾರ್ಗವನು ತೋರಿ ॥೨॥

ಸೂರಿ ವೆಂಕಟ ನೃಸಿಂಹಾರ್ಯಸುತ ಸುಜನೋಪ ।
ಕಾರಿ ವೆಂಕಟರಾಮ ನಾಮಧೇಯ ॥
ಚಾರುತರ ಆಶ್ರಮೋಚಿತ ಕರ್ಮಮಾಚರಿಸಿ ।
ವೈರಾಗ್ಯ ನಿಧಿ ವಿಷ್ಣುದಾಸಾರ್ಯತ್ವರಿತಾ ॥೩॥

ಗುರುವರಿಯ ಭುವನೇಂದ್ರ ಕರಕಮಲ ಸಂಜಾತ ।
ವರವ್ಯಾಸ ತತ್ವಜ್ಞ ಹರುಷದಿಂದ ॥
ಮರದು ವೈಷಿಕ್ಯ ವೈಭವ ವಾಸುದೇವ ।
ನರಹರಿಹಯಗ್ರೀವರಂಘ್ರಿಗಳ ಸ್ಮರಿಸುತಲಿ ।
ಸೋಜಿಗವಿದಲ್ಲ ಸಜ್ಜನರನುದ್ಧರಿಸುವುದು ।
ಶ್ರೀ ಜಗನ್ನಾಥವಿಠಲನ ಪಾದಾ ।
ರಾಜೀವಯುಗಗಳ ನಿರ್ವ್ಯಾಜದಲಿ ಭಜಿಪದೇ ।
ಪ್ರಯೋಜನವು ಇತರ ವ್ಯಾಪಾರಗಳ ತೊರೆದು ॥೪॥

ಶ್ರೀ ವ್ಯಾಸತತ್ವಜ್ಞತೀರ್ಥರ ಪೂರ್ವಜನ್ಮದ ಇತಿಹಾಸವನ್ನು ವರದ ಗೋಪಾಲವಿಠಲಾಂಕಿತರಾದ ದಾಸಪ್ಪದಾಸರು (ಶ್ರೀ ಗೋಪಾಲದಾಸರವರ ತಮ್ಮಂದರು) ಒಂದು ಉಗಾಭೋಗದಲ್ಲಿ ವಿವರಿಸಿರುತ್ತಾರೆ, ಆ ಉಗಾಭೋಗದ ನುಡಿಗಳನ್ನು ಸಂಗ್ರಹಿಸಿ ಇಲ್ಲಿ ತಿಳಿಸಲಾಗಿದೆ.

ದಾಸ ಪುರಂದರ ದಯಕೆ ಪಾತುರರಾದ ।
ವಾಸುದೇವವಿಠಲನ ದಾಸರ ।
ಲೇಸಾಗಿ ಭಜಿಸುವ ಭಾಗ್ಯವೇ ಕೊಡುಸದಾ ।
ಸೂಸಿ ಸುಖ ಉಂಬ ಸುರಲೋಕಕಿಂತ ।

ಈ ಸುಗುಣ ಗುರುತಿಲಕ ಶಿರೋರತುನ ।
ವ್ಯಾಸ ಮುನಿ ಪದಕಂಜ ಭೃಂಗರೆನಿಪ ।
ಶ್ರೀಶಗುರು ಕೃಷ್ಣನ ಭಜಕರ ಸಮೀಪದಲಿ ।
ವಾಸ ಮಾಡಿಸೋ ವರದ ಗೋಪಾಲವಿಠಲರೇಯ ।
ಲೇಸು ಇದಕ್ಕಿಂತ ಇನ್ನೊಂದಿಲ್ಲವೋ ।೧।

ಸ್ಮರಿಸು ಗುರುಗಳ ನಮನವೆ । ಸ್ಮರಿಸು ಗುರುಗಳು ನಿನಗೇ
ಪರಮ ಮಂಗಳ ಬಂದ ದುರಿತಪರ್ವತಕೆ ಪವಿಯೆಂದು ತಿಳಿಯೋ
॥ಅನು॥

ಉರಗವೃಶ್ಚಿಕವ್ಯಾಘ್ರ ಅರಸುಚೋರಾಗ್ನಿ ಕರಿಗರಳ
ಜ್ವರ ಮೊದಲಾದ ಭಯಗಳಿಂದ ಪೊರದು
ಮಂಗಳವೀವ ನರಹರಿಯ ದಾಸರ ಚರಣ
ಕಂಡನು ದುರಿತಪರಿಹಾರವಾಯಿತು ।೧।
ಗುರು ಸ್ಮರಣೆಯಿಂದ ಸಕಲ ವಿಪತ್ತು ಪರಿಹಾರ
ಗುರುಸ್ಮರಣೆಯಿಂದ ಸಂಪದೆವು ನಿನಗೆ
ಗುರುಸ್ಮರಣೆಯಿಂದ ಪುಷ್ಕಳದ್ರವ್ಯವದಗುವುದು
ಗುರುಸ್ಮರಣೆಯಿಂದ ಹರಿವಲಿದು ಪೊರವ ।೨।
ಗುರುಗಳಿಂದಧಿಕ ಇನ್ನಾರು ಆಪ್ತರು ನಿನಗೆ
ಗುರುಗಳೆ ಪರಮ ಹಿತಕರು ನೋಡು
ಗುರುಸ್ವಾಮಿವರದ ಗೊಪಾಲವಿಠಲ ಮಹದುರಿತಗಳ
ಕಳದು ಸುಖಗರಿವ ನೋಡು ।೩।

ಮಾಗಡೀ ರಂಗನಾಥೇನ ಕೃತಂಕರ್ಣಾಟ ಭಾಷೆಯಾ ।
ಚರಿತಂ ವ್ಯಾಸತತ್ವಜ್ಞ ಗುರೋರ್ಭೂಯಾನ್ಮುದೇ ಶುಭಂ ॥

ಶ್ರೀ ಮಧ್ವೇಶಾರ್ಪಣಮಸ್ತು



# ತಿದ್ದುಪಡಿ

| | | ಅಶುದ್ಧ | ಶುದ್ಧ |
|---|---|---|---|
| ಒಳಪುಟ 1 | 7 | ಮಾನಾಡಿದನು | ಮಾತನ್ನಾಡಿದನು |
| 2 | 10 | ಕಾರ್ರ್ತೀಕ | ಕಾರ್ತಿಕ |
| 3 | 1 | ಜನಾರ್ದನಾಚಾರ್ಯರು | ಜನಾರ್ದನಾಚಾರ್ಯರೂ |
| | 3 | ಇವರಿಗೆಲ್ಲಾ | ಇವರನ್ನು |
| | 12 | ವೆಂಕರಾಮಾಚಾರ್ಯರು | ವೆಂಕಟರಾಮಾಚಾರ್ಯರು |
| | 22 | ಕಿವಿಗು | ಕಿವಿಗೂ |
| 4 | 1 | ನೀವು | ನೀವೂ |
| | 3 | ವೆಂಕಟನರಸಿಂಹಾಚಾರ್ಯ | ವೆಂಕಟನರಸಿಂಹಾಚಾರ್ಯರೂ |
| | 4 | ವಯಸ್ಸಿನಲ್ಲಿ | ವಯಸ್ಸಿನ |
| | 15 | ನರಸಿಂಹಾಚಾರ್ಯ | ನರಸಿಂಹಾಚಾರ್ಯರ |
| 5 | 5 | ದೇವತೆಯು | ದೇವತೆಯ |
| | 5 | ದೃಷ್ಟ | ಧೃಷ್ಟ |
| | 5 | ಅವತಾರಭೂತನಾದ | ಅವತಾರಭೂತರಾದ |
| | 10 | ರಾಮಾರ್ಯರ | ರಾಮಾರ್ಯರು |
| | 10 | ಕರುಣ | ಕರುಣೆ |
| | 18 | ಕರತಲಾಮಲಕ | ಕರತಲಾಮಲಕದಂತೆ |
| 7 | 17 | ಜನೇಶ್ಬ | ಜನಸ್ಯ |
| 8 | 5 | ಆ ನಿವಾಸಿಗಳು | ಆ ಗ್ರಾಮದ ನಿವಾಸಿಗಳು |
| 9 | 16 | ಗಂದಕ್ಷತೆ | ಗಂಧಾಕ್ಷತೆ |
| | 24 | ವಿಧ್ಯಾ | ವಿದ್ಯಾ |
| 10 | 3 | ಬ್ಚಾಕ | ಬ್ಫಾಕಂ |
| | 8 | ವಿಧ್ಯಾ | ವಿದ್ಯಾ |
| | 13 | ಚಾತ್ರ | ಛಾತ್ರ |

| | | | |
|---|---|---|---|
| 11 | 9 | ರಾಜ | ರಾಜರ |
| | 17 | ನೋಡಿ | ನೋಡಿದ |
| 12 | 21 | ಮಹಿಮೆಯ | ಮಹಿಮೆಯು |
| 13 | 26 | ಕೊಂಡಿದ್ದು | ಕೊಂಡದ್ದ, |
| 14 | 10 | ನಮಗೆ | ನಮ್ಮನ್ನು |
| 20 | 20 | ವಹಿಸಾವ್ಯಾಪ್ತಯೇಶಶಂ | ವಹಿಸಾವ್ಯಾಪ್ತಯೇಶಸಂ |
| | 21 | ಸುತುಂ | ಸುತಂ |
| 22 | 24 | ಸೂತ್ರ | ಸೂಕ್ತ |
| | 25 | ಮಂತ್ರಗಳು | ಮಂತ್ರಗಳನ್ನು |
| 23 | 23 | ಶ್ರೀ ತಿರುಮಲೇಶನ | ಒಂದು ಸಲ ಶ್ರೀ ತಿರುಮಲೇಶನ |
| 24 | 3 | ಪತ್ನಿ | ಶ್ರೀ ಲಕ್ಷ್ಮೀ– |
| | 4 | ದಿವ್ಯರ | ದಿವ್ಯ– |
| | 8 | ಪರ್ವತಾರೋಹಣ | ಪರ್ವತಾವರೋಹಣ |
| | 22 | ಸ್ವಾಮಿಗಳು | ಸ್ವಾಮಿ– |
| 27 | 22 | ಕೊಡಲಿಲ್ಲಿ | ಕೊಡಲಿಲ್ಲ |
| 29 | 8 | ಕಂಡತೆ | ಕಂಡರತೆ |
| 30 | 14 | ಪುಸ್ತಕಳಗಳನ್ನು | ಪುಸ್ತಕಗಳನ್ನು |
| 31 | 14 | ಮದ್ಯಾಸ್ಥ | ಮಧ್ಯಾಸ್ಥ |
| 32 | 13 | ತೀರ್ಥ | ತೀರ್ಥರು |
| | 20 | ಉಲ್ಲಂಖಿತ | ಉಲ್ಲಿಖಿತ |
| 33 | 7 | ಪ್ರಾವೀಣ್ಯತೆ | ಪ್ರಾವೀಣ್ಯ |
| | 13 | ಕಳುಹಿಸಿವರು | ಕಳುಹಿಸಿದರು |
| | 22 | ವಿದ್ವಕ್ತಿಗೆ | ವಿದ್ವತ್ಸಭೆಗೆ |
| 35 | 9 | ದೃಷ್ಟದ್ಯುಮ್ನ | ಧೃಷ್ಟದ್ಯುಮ್ನ |
| | 23 | ಅವಕಾಶ | ಅವತಾರ |
| 40 | 2 | ರಾಜರು | ರಾಜನು |
| 41 | 12 | ವೈಶಾಖ | ವೈಶಾಖಮಾಸ |
| 44 | 3 | ವ್ಯಾಸದೇವ | ವಾಸುದೇವ |

ಗ್ರಂಥ ರಚನೆ :— ಈ ಮಹಾನು ಭಾವರು ರಚಿಸಿರುವ ಸಂಸ್ಕೃತ ಭಾಷೆಯಲ್ಲಿರುವ ಗ್ರಂಥ ರತ್ನಗಳು.

1) ಮಾನಸಸ್ಮೃತಿ (ಉಪಾಸನಾ ವಿಭಾಗ)
2) ಸಪ್ತಮಸ್ಕಂದ ಭಾಗವತಕ್ಕೆ ಮಂದಾನಂದಿನೀ ವ್ಯಾಖ್ಯಾನ.
3) ಗಾಯತ್ರೀ ಸಾರ ಸಂಗ್ರಹ
4) ಉಭಯಾ ಸೌಚಿತಿ
5) ಸುಧಾದ್ಯುಕ್ತಿ ರಹಸ್ಯ
6) ನ್ಯಾಯಾಮೃತ ಪರೀಕ್ಷಿತಾವ್ಯ ಜನ
7) ತಾತ್ಪರ್ಯ ಚಂದ್ರಿಕಾಶರದಾಗಮ
8) ಅದ್ವೈತಿ ಕುಟ್ಟನ ಇದರಲ್ಲಿ ಐಕ್ಯವಾದವನ್ನು ಖಂಡತುಂಡಾಗಿ ಖಂಡಿಸಿರುತ್ತಾರೆ.
9) ನ್ಯಾಯದಮನ
10) ಕುಲಿಶ
11) ಶ್ರೀಮದ್ವಿಷ್ಣು ತತ್ವನಿರ್ಣಯಕ್ಕೆ ಲಘು ಪ್ರಭಾ ಎಂಬ ಪ್ರೌಢ ವ್ಯಾಖ್ಯಾನ.
12) ಶ್ರೀಮದ್ವಿಷ್ಣು ತತ್ವವಿನಿರ್ಣಯಕ್ಕೆ ಗುರು ಪ್ರಭಾ ಎಂಬ ಅತ್ಯಂತ ಪ್ರೌಢ ವ್ಯಾಖ್ಯಾನ. ಇನ್ನೂ ಅಚ್ಚಾಗಿಲ್ಲ.
13) ಶ್ರೀಮನ್ನ್ಯಾಯಸುಧಾ ಪ್ರಾಣಾಧಿಕರಣಕ್ಕೆ ರಸರಂಜನೀ ಎಂಬ ವ್ಯಾಖ್ಯಾನ.
14) ಕನ್ನಡದಲ್ಲಿ (ಶ್ರೀ ವಾಸುದೇವವಿಠ್ಠಲಾಂಕಿತ) ಅನೇಕ ದೇವರನಾಮಗಳು, ಉಗಾಭೋಗಗಳು, ಸುಳಾದಿಗಳು. ಮೊದಲಾದವುಗಳು.

---

ಶ್ರೀ ಲಲಿತ ಮುದ್ರಣಾಲಯ, 53/2 ಅಣ್ಣಯ್ಯಪ್ಪ ಬ್ಲಾಕ್, ಸಾರಕ್ಕಿ, ಬೆಂ-78